# ಭೋಜ-ಕಾಲಿದಾಸ

[ಯಕ್ಷಗಾನ]



ಲೇ.— ಮಂಜುನಾಥ ಎಸ್. ಭಾಗವತ, ಕಡತೋಕಾ.



ಪ್ರಥಮ ಮುದ್ರಣ. ಪ್ರತಿ— ೧೦೦೦

ಬೆಲೆ— ೬ ಆಣೆ.]  [೧೯೫೯

# ಭೋಜ—ಕಾಲಿದಾಸ.

## (ಯಕ್ಷಗಾನ)

ಈ ಪುಸ್ತಕ ಸಿಗುವ ಸ್ಥಳ

ಎಂ. ಎಸ್. ಭಾಗ್ವತ ಕಡತೋಕಾ

ಪೋ :— ಕಡತೋಕಾ.

ತಾ :— ಹೊನ್ನಾವರ.

[ ಉ.ಕ. ]

ಪಿ. ಕೃಷ್ಣ ಭಟ್ಟ ನೂಜೆ

ಪೋ :— ಪುತ್ತೂರ.

[ ದ. ಕ. ]

# ಮುನ್ನುಡಿ

ಶ್ರೀ ಮಂಜನಾಥ ಎಸ್. ಭಾಗವತ, ಕಡತೋಕಾ ಇವರು ಸ್ವತಃ ಯಕ್ಷಗಾನದ ಸುಪ್ರಸಿದ್ಧ ಭಾಗವತರು; ಪ್ರಖ್ಯಾತ ಮೇಳಗಳಿಂದ ನೂರಾರು ರಂಗಗಳಲ್ಲಿ ಯಶಸ್ವೀ ಪ್ರಯೋಗಗಳನ್ನು ಆಡಿಸಿರುವರು. ಪ್ರತಿಭಾನ್ವಿತ ವ್ಯಕ್ತಿ. ಸಾಹಿತಿಗಳೂ ಹೌದು. "ಯಕ್ಷಗಾನ" ಮಾಸ ಪತ್ರಿಕೆಯನ್ನು ಸ್ಥಾಪಿಸಿ, ಪ್ರಭಾವಿಯಾಗಿ ನಡೆಸಿದ ಖ್ಯಾತಿ ಅವರದು. ಇಂತಹ ಚತುರ್ಮುಖ ವಿಕಾಸವುಳ್ಳ ಮಹನೀಯರಿಂದ ಪ್ರಸ್ತುತ ಗ್ರಂಥವಾದ ಭೋಜ— ಕಾಳಿದಾಸ ಎಂಬ ಯಕ್ಷಗಾನ ಗ್ರಂಥವು ಆಸ್ಥಾಪೂರ್ವಕವಾಗಿ ಬರೆಯಲ್ಪಟ್ಟಿದೆ. ಅಂದಾಗ ಈ ಗ್ರಂಥದ ಹಿರಿಮೆಯನ್ನೇನೂ ವರ್ಣಿಸಬೇಕಾಗಿಲ್ಲ. ಭಾಷೆ ಸರಳ-ಸುಂದರವಿದೆ. ಸಮಯೋಚಿತ ರಾಗ-ರೀತಿಗಳು ರಂಜಿಸಿವೆ. ಈ ಗ್ರಂಥದ ಹತ್ತಿಪ್ಪತ್ತು ಬಯಲಾಟ ಪ್ರಯೋಗಗಳಾಗಿದ್ದು, ಅವೆಲ್ಲ ತುಂಬಾ ಜನಪ್ರಿಯವಾಗಿವೆ. ಒಂದರ ಮುಂದೊಂದಾಗಿ ಬರುವ ಪಾತ್ರ-ಪ್ರವೇಶಗಳು ಕುತೂಹಲ ಕ್ಷೋಭಕವಾಗಿ, ರಸ-ಪೋಷಕವಾಗಿ ಶೋಭಿಸುವವು. ಶ್ರೀ ಭಾಗವತರು ಸ್ವತಃ ರಂಗ-ತಜ್ಞರಾದುದರಿಂದಲೇ ಈ ಅಪರೂಪ ಕೈಚಳಕ ಸಾಧಿಸಿದರೆನ್ನಬೇಕು. ಹೊಸ ಯಕ್ಷಗಾನ ಗ್ರಂಥ ರಚನೆಗೆ ಇದೊಂದು ಉತ್ತಮ ಮಾದರಿ. ಕನ್ನಡಿಗರಿದನ್ನು ಗುಣಜ್ಞತೆಯಿಂದ ಮನ್ನಿಸಬೇಕು. ಶ್ರೀ ಭಾಗವತರು ಇಂಥ ಹಲವಾರು ಯಕ್ಷಗಾನ ಗ್ರಂಥಗಳನ್ನು ಬರೆದು, ಆ ಭವ್ಯ ಕಲೆಯ ಉತ್ತಮ ಸೇವೆಗೈಯ್ಯಬೇಕು— ಎಂದು ಹಾರ್ದಿಕವಾಗಿ ಹಾರೈಸುತ್ತೇವೆ.

**ಗ. ಶ. ಸರ್ಪಕರ್ಣೇಶ್ವರ.**

ಸಾಧನೋದ್ಯಾನ,-ಹೊನ್ನಾವರ. ( ಉ. ಕ. )

## —ಃ ಲೇಖಕರ ಮಾತು ಃ—

ಭೋಜ—ಕಾಳಿದಾಸವೆಂಬ ಈ ಗ್ರಂಥವು ಯಕ್ಷಗಾನರೀತಿಯಲ್ಲಿ ನನ್ನ ಮೊದಲನೆಯ ಕೃತಿ. ನನ್ನ ತೀರ್ಥರೂಪರು ಶ್ರೇಷ್ಠ ಸಂಗೀತ-ತಜ್ಞರೂ ಪ್ರತಿಭಾವಂತರೂ ಆದ ಭಾಗವತರಾಗಿ,ಉತ್ತರ–ಕನ್ನಡ ಜಿಲ್ಹೆಯಲ್ಲಿ ಪ್ರಸಿದ್ಧರೂ ಜನಪ್ರಿಯರೂ ಆಗಿಹೋದರು. ಅವರು ನೀಡಿದ ಮಹಾ ಸಂಸ್ಕಾರದ ಬಲದಿಂದ ನಾನೂ ಭಾಗವತನಾಗಿ, ಯಕ್ಷಗಾನದ ಸೇವೆಯನ್ನು ಸ್ವಲ್ಪವಾದರೂ ಮಾಡಲು ಅಣಿಯಾದೆನೆಂದು ನಂಬುತ್ತೇನೆ. ಆಕಸ್ಮಿಕವಾದ ಮನಃಪ್ರೇರಣೆಯಿಂದ ಈ ಗ್ರಂಥವನ್ನು ನಾನು ಬರೆದಿದ್ದು, ಉತ್ತರ-ಕನ್ನಡದಲ್ಲಿ ರಂಗಭೂಮಿಯ ಮೇಲೆ ಇದನ್ನು ಪುನಃಪುನಃ ಪ್ರಯೋಗಮಾಡಲಾಗಿದೆ. ಉತ್ತಮ ನಟವರ್ಯರ ಸಹಯೋಗದಿಂದ ಈ ಪ್ರಸಂಗವು ಅತ್ಯಂತ ಜನಪ್ರಿಯವಾದುದನ್ನು ಕಂಡು ಆತ್ಮವಿಶ್ವಾಸದಿಂದ ಇದನ್ನೀಗ ಯಕ್ಷಗಾನ ಸಾಹಿತ್ಯಕ್ಕೆ ಕಾಣಿಕೆಯೆಂದು ನೀಡಲು ಅಚ್ಚುಹಾಕಿಸಿರುವೆನು. ಈ ಕಾರ್ಯಕ್ಕೆ ಉಪಕರಿಸಿದ ಅನೇಕ ಸಜ್ಜನರಿಗೆ ನನ್ನ ಕೃತಜ್ಞತೆ. ಪ್ರೂಫು ತಿದ್ದುವದು ಮೊದಲುಗೊಂಡು ಎಲ್ಲ ಮುದ್ರಣ ಭಾರವನ್ನು ಹೊತ್ತು ಕೆಲಸ ನೆರವೇರಿಸಿದ ಶ್ರೀ ಶ್ರೀಧರ ಮುದ್ರಣಾಲಯದ ಒಡೆಯರಾದ ಶ್ರೀ ಸರ್ಪಕರ್ಣೇಶ್ವರರ ಕಾರ್ಯ ಸ್ಮರಣೀಯವಾದುದು. ಸಹೃದಯರಾದ ಯಕ್ಷಗಾನಪ್ರಿಯರಿಗೆ ನನ್ನೀ ಕೃತಿಯು ಮೆಚ್ಚುಗೆಯಾದರೆ ಅದೊಂದು ನನ್ನ ಪರಿಶ್ರಮದ ಸಾರ್ಥಕತೆ.

ಇತಿ ಸಜ್ಜನವಿಧೇಯ—

**ಎಂ. ಎಸ್. ಭಾಗವತ, ಕಡತೋಕಾ.**

# ಭೋಜ ಪ್ರಬಂಧ

ಶ್ಲೋಕ

**ಗಜಾನನಂ ಭೂತಗಣಾಧಿ-ಸೇವಿತಂ । ಕಪಿತ್ಥಜಂಬೂಫಲಸಾರ ಭಕ್ಷಕಂ ॥ ಉಮಾಸುತಂ ಶೋಕವಿನಾಶಕಾರಣಂ । ನಮಾಮಿ ವಿಘ್ನೇಶ್ವರಪಾದಪಂಕಜಂ ॥**

## ಪ್ರವೇಶ ೧ —

ಸೌರಾಷ್ಟ್ರ ತ್ರಿಪುಡೆ

ಇತ್ತಲಾ ಉಜ್ಜಯನಿ ಪುರದೊಳು । ಚಿತ್ತದಲಿ ಕಳವಳವ ಗೊಳ್ಳುತ । ಸತ್ಯ ವ್ರತ ನಿಷ್ಣಾತ ಸಿಂಧುಲ। ಚಿತ್ತರಿಸಿದಾ ॥೧॥

ಲಾಲಿಸಯ್ಯ ಪ್ರಧಾನಿ ದೇಹದಿ। ತಾಳಲಾರದ ಬಾಧೆಯಿರುವದ। ಪೇಳಲಾರದೆ ಕಳೆದೆ ಮೌನದಿ । ಕಾಲವಿನಿತೂ ॥ ೨ ॥ ಇನ್ನು ಭುವಿಯೊಳು ಬಾಳುವಂತಹ । ಚಿಹ್ನೆಯಿಲ್ಲದೆ ಸಾಯುವಾಕ್ಷಣ । ಸನ್ನಿಹಿತವಾಗಿರುವ ಬಗೆಯನು । ಎನ್ನಲೆಂತೂ ॥ ೩ ॥ ಕರೆಸು ಎನ್ನ ಕುಮಾರ ಭೋಜನ। ಬರಿಸು ಪತ್ನಿಯ ಅನುಜ ಮುಂಜನ। ಮರೆಸು ಪುತ್ರಸಮಾನ ಪ್ರಜೆಗಳ। ಭರಿತ ವ್ಯಥೆಯಾ ॥ ೪ ॥

ಭಾಮಿನಿ

ಧಾರಿಣಿಪನಾಜ್ಞೆಯೊಳು ಸಚಿವನು । ಚಾರಕರನಟ್ಟುತಲಿ ವೃದ್ಧತರ । ಪಾರಮಾರ್ಥಿಕ ವಚನದಿಂದಲಿ ಸಂತವಿಸುತಿರಲೂ॥ ಭೋರನೈತಂದಾಗ ಪ್ರಭುವಿನ।

ಚಾರುತರ ಮುಖನೋಡಿ ಭೋಜಕು | ಮಾರ ರಾಣಿಯು, ಮುಂಜ ನುಂ ತಾಗೆಲ್ಲರಳುತಿರಲೂ || ೧ ||

ಸಾಂಗತ್ಯ ರೂಪಕ

ಇತ್ತ ಬಾರೈ ತಮ್ಮ | ಅತ್ತ ಪೋಗುವ ಪಯಣದ | ಪೊತ್ತಿನಲ್ಲಿ ಪೇಳುವಪ | ಚಿತ್ತವಿಸಿ— ಕೇಳೈ || ೧ || ತಂದೆ ಪರಂಧಾಮ ವೈದಿದ ಕಾಲದ ಅಂದಿನಿಂದಿಂದಿನ ಪರಿಗೂ || ಕಂದನೆಂದೆಂಬ ವಾತ್ಸಲ್ಯದಿ ಸಲಹಿದ | ತಂದೆ ಮನದಾರಯ್ಯಪ್ರಸುಗೂ || ೨ || ತೀರಿತಿಂದಿಗೆ ಎನ್ನ ಋಣಭಾರ ಕಂದನೆ | ದಾರುತ್ತಿದೆ ಕಾಯ ಪಂಜರ ಪ್ರಾಣಪಕ್ಷಿ || ಈ ರಾಜ್ಯಶ್ರೈಸಿರಿ ಪಾರು ಪತ್ಯಪನೀನು | ವಿನೋಚಿತದಿ ಪಾಲಿಸುವೆಯಾ ? || ೩ || ತಂದೆ ಕೇಳೈ ನಿನ್ನ ಕಂದ ಪ್ರೀತಿಯ ಭೋಜ | ಚಂದದಿ ಪ್ರಭುವಾಗೆ ನಾನೂ || ಅಂದಿನಾ ಭರತನ ತೆರದೊಳು ಯಾವುದೇ | ಕುಂದಿಲ್ಲದಾತಿ ರಕ್ಷಿಪೆನೂ || ೪ || ಅರಿಯದ ಬಾಲಕ ಮುದ್ದು ಹಸುಳೆ ಭೋಜ | ಪರಿಪಾಲಿಸೈ ರಾಜ್ಯ ತಮ್ಮ || ಕರುಳ ನೇಹದಿ ಪ್ರಜೆ—ಪರಿವಾರ ವರ್ಗವ | ಧರುಮದಿ ನೋಡಿಕೋ ನಮ್ಮ || ೫ || ಮಕ್ಕಳೆಂದೇ ಭಾವಿಸುತ್ತ ಭೋಜನಿಗೆ ನೀ | ನಕ್ಕರೆಯೊಳು ಅಕ್ಕರಾದಿ || ತಕ್ಕಾದ ಕ್ಷಾತ್ರವಂಶೋಚಿತ ವಿದ್ಯೆಯ | ಚೊಕ್ಕಟದಿಂ ಕಲಿಸುವೆಯಾ ? || ೬ || ಬುದ್ಧಿವಾದವ ಪೇಳಿ ಬುದ್ಧಿಸಾಗರಗೆ ನೀ | ನಿದ್ದು ಸೂಚಿಸಿ ಸಲಹೆಯಿಂದ || ತಿದ್ದಿಕೋ ಪಂಜಭೋಜರು ಹೊಸಬರು ರಾಜ್ಯ | ದುದ್ಯಮೋದ್ಯಾಮ ನೀ ನೋಡು || ೭ || ಇಂತೆನುತ ಕಂಪ, ಕಾದಲೆ ಮುಂಜ ಮುಖ್ಯರ | ಸಂತವಿಸುತ್ತಿರಲಾಗಾ || ಸಂತು ಸಿಂಧುಲ ಭೂಪನಿಗೆ ಐಹಿಕದ ಋಣ | ನಿಂತುದು ಪ್ರಾಣ ಸಂಚಾರಾ || ೮ ||

(ಎಲ್ಲರೂ ಅತೀವ ದುಃಖಿಸುತ್ತಾರೆ)

ಭಾಮಿನಿ

ಮಂತ್ರಿ ದುಃಖದಿ ಬೆಂದು ಪೇಳಿದ | ಚಿಂತಿಸುವದನುಚಿತವು ತಾಳಿರಿ | ಅಂತ ರಾತ್ಮನು ಪರಮ ಆತ್ಮನೊಳ್ ಬೆರೆಯುವದು ಸಹಜಾ || ಕಂತುಪಿತ ಸದ್ಗತಿ ಯನೀಯಲಿ | ಮುಂತೆ ಸೌಖ್ಯಗಳಾಗಲೆನ್ನುತ | ಸಂತಸದಿ ಬೇಡುವದು ಆ ಭಗವಂತ ಚರಣದಲೀ || ೧ ||

## ಪ್ರವೇಶ ೨ — (ಕೆಲವು ಕಾಲಾನಂತರ)

ಭೈರವಿ ಝಂಪೆ

ಇತ್ತ ಮುಂಜನುಮನವಿ । ಮತ್ತನಾಗುತ ಪೇಳ್ದ । ಕೃತ್ತಿವಾಸನು ದಯದಿ ಇತ್ತನೀಭಾಗ್ಯ ॥ ೧ ॥ ಭಳಿರೆ ಶಾಭಾಸು ಬಯ । ಸಿರುವ ಸೌಭಾಗ್ಯಫಲ। ನಲವಿಂದ ಕೈಸೂಂತು । ಬಲು ತೋಷವಾಯ್ತು ॥ ೨ ॥ ಊರ್ವಿಪತಿ ಯಾದ ಉಜ್ಜಯನಿ ಪಾಲಕ ಮುಂಜ । ಸರ್ವರೊಳು ಶ್ರೇಷ್ಠನೆಂದೆಂಬಾ ॥ ಗರುವದಿಂ ಮೆರೆವೆನ್ನ ಗಾಂಭೀರ್ಯದುನ್ನತಿಕೆ । ಪೂರ್ವಪತಿಗೂ ಮಿಗಿಲು ಫಲರೇ ॥ ೩ ॥ ಎಷ್ಟು ಕಾಲಾಯುಷ್ಯ । ಅಷ್ಟೈಶ್ವರ್ಯವಿದಕೆ । ದಿಟ್ಟಭೋಜನು ಬೆಳೆದ ಮೇಲೆ ॥ ಕಷ್ಟವೈ ಆಧಿಪತ್ಯವನು ದಕ್ಕಿಸಿಕೊಂಬು । ದೆಷ್ಟುಕೂ ಬಿಡನಾತ ಸಿದ್ಧ ॥ ೪॥ ಮಾಡಲೇನೆಂದು ಆ ಮನದೊಳಗೆ ಯೋಚಿಸಿದ। ಆಡಲಾರದ ಕುಟಿಲ ಯುಕ್ತಿ ॥ ಮೋಡಿತನದಿಂದ ಬಾಹ್ಯದಿ ಪ್ರೀತಿ-ವಾತ್ಸಲ್ಯ । ಕೂಡೆ ಪ್ರಕಟಿಸುತ ಭೋಜನಲೀ ॥ ೫ ॥ ನೋಡುವರ ಕಣ್ಗೆ ಮಣ್ಣೆರಚಿ ಅಂತರ್ಯದೊಳು । ಗಾಢತಮ ವಿಷವ ಬಚ್ಚಿಕ್ಕಿ ॥೬॥ ಕರೆಸುತ್ತ ಮಂತ್ರಿ ಯನು ಧರಣಿಪಾಲಕ ಕೇಳ್ದ । ಭರದಿ ಪೇಳ್ವೆ ರಾಜ್ಯದೊಳಗೇ ॥ ಪರಿವಾರ ಪ್ರಜೆಗಳೆಲ್ಲರು ಪೇಳ್ವುದೇನೆಂದು । ಒರೆಯಬೇಹುದು ತ್ವರಿತದಿಂದಾ ೭

ಕೇದಾರಗೌಳ ಝಂಪೆ

ಕೇಳು ದೊರೆರಾಯ ನೀನೂ । ಸಂತಸದಿ । ಪೇಳ್ವೆ ಲೀಲೆಯೊಳಗಾನೂ ॥ ತಾಳಿಹರು ತೋಷವನ್ನೂ । ತಿಳಿದಿಹರು । ಆಳಿಕೆಯ ಗುಣಗಳನ್ನೂ ॥ ೧ ॥ ತಂವೆ ಸಿಂಧುಲನ ಮಾನ । ಕೀರ್ತಿಗಳ । ಚಂದ ಪಾಡುವರು ಗಾನ ॥ ಅಂದಿನಾ ಆದರ್ಶವಾ । ಕಾದುಕೊಂ । ಡಿಂದು ಪಾಲಿಪೆ ರಾಜ್ಯವಾ ॥ ೨ ॥ ಎನ್ನ ಆಡಳಿತ ರೀತಿ । ನಾವೀಸ್ವ । ವನ್ನು ಪ್ರಕಟಿಪುದು ನೀತಿ ॥ ಮುನ್ನಿ ನಂತಲ್ಲವಿನ್ನೂ । ಸರಳತನ । ವೆನ್ನಲ್ಲಿ ನಡೆಯದಿನ್ನೂ ॥ ೩ ॥

ಭಾಮಿನಿ

ಅಳಿದನ ಕಾಪಟ್ಯ ಪೂರಿತ । ಪೇಳಿಕೆಯ ಕೇಳುತ್ತ ಸಚಿವನು । ತಾಳಿಹನು ಗರ್ವವನು ಮುಂಜನು ಅನತಿಶಯದಲೀ ॥ ಕಾಲಗತಿ ವಿಪರೀತವೆನ್ನುತ ।

ಮೇಲೆ ತನ್ನಯ ಭವನಕ್ಕೈದಲು । ಭೂಲಲಾಮನ ಓಲಗಕೆ ತಾ ಬಂದ ಭೂದೇವ ॥ ೧ ॥

ಕೇತಾರಗೌಳ-ಅಷ್ಟ

ಸ್ವಾಮಿ ಶಂಕರ ವ್ಯೋಮಕೇಶ ಸದಾಶಿವ । ಭೂಮಿಜೀವರ ಸಖನೇ ॥ ಕಾಮ ವೈರಿಯೆ ಗುಣಧಾಮ ದೀನೋದ್ಧಾರ । ಶ್ರೀಮಹೇಶ್ವರ ಶಿವನೇ ॥ ೧ ॥ ಬರುತಿಹ ಭೂಸುರವರನ ಕಾಣುತ ಮುಂಜ । ಹರಿಪೀಠದಿಂದಲಿದ್ದೂ ॥ ಭರ ದಿಂದಲದಿಗೊಂಡು ಪೀಠವನಿತ್ತುಪ । ಚರಿಸುತ ಬೆಸಗೊಂಡನೂ ॥ ೨ ॥ ಎಲ್ಲಿಂದ್ಯೆತಂದಿತು ದಿವ್ಯ ಸ್ವಾರಿಯು ಗೃಹ । ವೆಲ್ಲೆಂಬ ಪರಿಚಯವಾ । ಇಲ್ಲಿಗೈ ತಂದಿಹ ಹದನವದೇನೆಂದು । ಉಲ್ಲಾಸದಿಂ ಪೇಳ್ವುದೂ ॥ ೩ ॥

ಶಂಕರಾಭರಣ-ಅಷ್ಟ

ಕೇಳಯ್ಯಾ । ಭೂಪ । ಕೇಳಯ್ಯಾ ॥ ಕೇಳಯ್ಯ ಅರುಹುವೆನೆನ್ನಯ ಸ್ಥಿತಿಯಾ। ಇಳೆಯೊಳು ಭರತವರ್ಷದ ಅತ್ಯುನ್ನತಿಯಾ ॥ ೧ ॥ ಅಲ್ಲಿ ದಕ್ಷಿಣದ ದ್ರಾವಿಡದೇಶಂಗಳಲೀ । ಒಳ್ಳೇ ಸಂಭ್ರಮದಿ ಮೆರೆವ ಕೇರಳದಲೀ ॥ ಲೋಕಪ್ರಸಿದ್ಧ ಜೋಯಿಸರೊಬ್ಬರಲ್ಲೀ। ನಾ ಕಲಿಯುತ ಹೀಗೆ ತಿರುಗುತಲ್ಲಲ್ಲೀ ॥ ಕೇಳಯ್ಯ ॥ ೨ ॥ ಬಹುಮಾನ ಪಡೆದು ಉತ್ತರ ಭಾರತದಲೀ । ವಹಿಲದಿ ಮೆರೆವ ಮಹೀಶ ನಿನ್ನಲ್ಲೀ ॥ ಮಹಿಸುರ, ದೀನ, ದಲಿತ, ವರ್ಗಕೆಲ್ಲಾ । ನಹಿ ಯೆನ್ನದೌದಾರ್ಯ ವಿಹುದೆಂಬರೆಲ್ಲ ॥ ಕೇಳಯ್ಯ ॥ ೩ ॥ ಅದಕೇಳಿ ಬಂದೆ ನಿನ್ನೆಗೆ ರಾಜಚಂದ್ರ । ಮುದದಿ ಹಸ್ತವ ತೋರಿಸೈ ಗುಣಸಾಂದ್ರಾ॥ ಹದಿನಾರು ವರುಷದೊಳಿಪ್ಪ ಜಲಗಂಡ । ಅದನೊಬ್ಬ ದ್ವಿಜ ಹರಿಸಿದನು ಪ್ರಚಂಡ ॥೪॥

ಕಾಂಬೋಧಿ-ಅಷ್ಟ

ಕೇಳಿ ವಿಸ್ಮಿತನಾಗುತಾಗಾ । ಮುಂಜ । ಪೇಳಿದ ನಗುತ ಮತ್ತಾಗ॥ ಬಾಲ ನೆನ್ನಯ ರಾಜಕುಂಜರಹಸ್ತವ । ಲೀಲೆಯಿಂ ನೋಡಿ ನೀವ್ ಪೇಳಿ ಭವಿಷ್ಯವ ॥ ೧ ॥ ಎನುತಬಾತನ ಕರೆಸಿದನೂ । ಬ್ರಾಹ್ಮ । ಣನನುಂದೆ ಕರವ ಕಾಣಿಸಿದನೂ ॥ ಮನದಿ ಸಂಶಯಗೊಂಡು ಮೌನದಿ ಕುಳಿತಿಹ । ವಿನುತ ಜೋಯಿಸರ ಸಾಂತ್ವನ ಪಡಿಸಿದನೂ ॥ ೨ ॥ ಎನ್ನುತ್ತರಾಧಿಕಾರಿಯನೂ । ಮತ್ತೆ । ಒಣ್ಣಿಸಲಾಪನೆ ಶೇಷನೆ ತಾನೂ ॥ ಚಿಣ್ಣನ ಗುಣ, ವಿದ್ಯೆ

ರೂಪು ಪ್ರಭಾವವ । ಎಣ್ಣಿದರೆನಗ್ಗು ರ್ಷವುಣ್ಮಿ ಬರುತಲಿದೆ ॥ ೩ ॥ ಇದು ಸಿದ್ಧ ಸಹಜ ಭೂಪಾಲಾ। ಜೀವನದಿ ಸೌಖ್ಯ ಪಡೆಯಲಾರನು ನಿನ್ನ ಬಾಲಾ॥ ಮೇದಿನಿಪತಿಯುಪ್ಪ ಶುಭ ಲಕ್ಷಣಂಗಳು। ಶೋಧಿಸಿದರು ಕಾಣಲಾರವು ಶೀಲಾ ॥ ೪ ॥ ಚಿಂತೆಯೊಳುರಿಯುತ್ತಲಿರಲೂ । ಆಗ । ಮಂತ್ರಿ ಭೋಜನ ಕರೆದ್ದುಸ್ತ ತೋರಿಸಲೂ ॥ ಸಂತೋಷದಿಂದ ಭೂ ಸುರ ಪೇಳ್ದನಾಕ್ಷಣ । ಕಂತುರೂಪನ ದಿವ್ಯದುತ್ತರ ಸ್ಥಿತಿಯಾ ॥ ೫ ॥ ಕೇಳು ಭೂಪೋತ್ತಮನೀನೂ । ತೋಷ । ತಾಳು ಚಿಂತೆಯ ಹೊರದೂಡು ಮತ್ತದನೂ ॥ ಜಾಲವಲ್ಲೀ ಮಾಕು ಏಳು ತಿಂಗಳು ಐವ । ತ್ತೇಳು ವತ್ಸರ ಪರಿಯಂತ ಶಾಸಿಪನೂ ॥ ೬ ॥ ಭರತವರ್ಷಕೆ ಮೊರೆಯಾಗೀ। ನುತ್ತೆ । ನಿರತ ಸುರೇಶಗೆ ಸರಿಮೊರೆಯಾಗೀ॥ ವರಕವಿವಿದ್ವಾಂಸಗಣಕೆ ಆಶ್ರಯವಿತ್ತು ಪರಿಪಾಲಿಸನು ಶಾರದಾಂಶ ಸಂಭೂತನೂ ॥ ೭ ॥

ಸೌರಾಷ್ಟ್ರ ತ್ರಿಪುಡೆ

ಕೇಳಿ ಕಳವಳಗೊಂಡು ಮನದಲಿ । ತಾಳಿ ನಟನೆಯ ತೋಷವನುತಾ । ಬೀಳುಗೊಟ್ಟನು ಭೂದಿವಿಜನನು। ಲೀಲೆಯಿಂದಾ ॥ ೧ ॥ ಮುರಿದು ಬಿದ್ದುದೆ ಬಯಕೆ ಮರತಾ । ಹರಿದು ಹೋದುದೆ ಆಶಾತಂತುವು । ಶರದಿಗೈದಂತಾಯ್ತೆ ಹೋಮುವ । ಪರಿಕಿಸುವಡೇ ॥ ೨ ॥ ತರಳನಿಗೆ ದೊರಕುವದು ರಾಜ್ಯವು । ಭರಿತಸಂಪದ ವೆನುತಲೀ । ಪರಿ ಪರಿಯು ಸುಂದರದ ಸ್ವಪ್ನಮಂದಿರವರಚಿಸೀ ॥ ೩ ॥ ಇರುತಿರಲು ಇಂತಾಯ್ತೆ ಶಿವ ಶಿವ । ಕೊರಗಿ ಮಾಡುವದೇನು ಮುಂದಕೆ। ಬರುವ ಕಂಟಕ ನಾಶನಕೆ ತಾ। ನಿರಲು, ಭಯವೇ

ಮಧ್ಯಮಾವತಿ ಏಕ

ಬಾಲರಕೂಡ ಆಡುವಭೋಜನನ್ನೂ । ಕಾಲಸ್ವರೂಪಿ ಮುಂಜನು ಕಂಡು ತಾನೂ ॥ ೧ ॥ ಬಾರೋ ಬಾ ಬಾ ಕಂದ ಭೋಜ ನೀ ಬೇಗೇ । ಸಾರುವ ನಗರ ಸೌಂದರ್ಯವೀಕ್ಷಣೆಗೇ ॥ ೨ ॥

ಭಾಮಿನಿ

ಎಂದು ಮೃದುತರ ಮಾತಿನಲ್ಲಿಯೆ। ಕಂದವನು ಒಡಬಡಿಸಿ ಬಧಂನಮಂದಿರ

ದೊಳಿರಿಸಿದನು ಏನ್‌ಕ್ರೂರತೆಯೋ ಮುಂಜನಿಗೇ || ಚಂದದಿಂ ನಿಲಯಕೆ ಬೇಗದಿ | ಬಂದು ಮನದೊಳು ಅರಿವಿನಾಶನ | ಕೆಂದು ಚಿಂತಿಸಿ ನೊಂದು ಬೆಂದನು ಹಲವು ತೆರನಾಗೀ ॥ ೧ ||

ಸಾಂಗತ್ಯ ರೂಪಕ

ಏನಮಾಡಲಿ ವೈರಿವಧೆಗೆ ಉಪಾಯ ಮುಂ | ದೇನಾಗುವದೊ ಶಿವಬಲ್ಲಾ ||೧|| ಚಿಣ್ಣನಾಗಲಿ ವೈರಿ| ಅಲ್ಪವಿರಲಿ ವಿಷ | ಸಣ್ಣದಾಗಲಿ ಕಿಡಿಯದುವೇ || ಮುನ್ನ ಬೆಳೆದು ಕಂಟಕವ ತಂದು ಹಾಕುವ | ದೆನ್ನುವ ಮಾತು ಸುಳ್ಳಲ್ಲಾ ||೨|| ತಂತ್ರಸಾಧನೆಗೆನ್ನ ಮಂತ್ರಿಮಂಡಲವು ಕು | ತಂತ್ರವ ಬಯಲಿಗೆ ತರದೇ ? ಆಂತರಂಗದ ಆಪ್ತ ವತ್ಸರಾಜನು ಮಾತ್ರ | ಇಂಥ ಕಾರ್ಯವ ಸಾಧಿಸುವನೂ ||೩||

## ಪ್ರವೇಶ ೩ — ಮುಂಜ–ವತ್ಸರಾಯ (ಇರುಳಿನಲ್ಲಿ)

ಬಿಹಾಗ ಅಷ್ಟ

ಬಾರೋ ಬಾರೋ ವತ್ಸಾಖ್ಯ ನೀನೂ | ಕಾರಸ್ಥಾನದಿ ನಿನ್ನ ಚಾತುರ್ಯವೇನೂ || ಧಾ / ರಿಣಿಯೊಳು ಬೇರೆ ಕಾಣುವರೇನೂ | ವರ್ಣಿಸಲಾನೂ | ಮೀರಿದೆ ನೀನೂ| ಮೆಚ್ಚಿದೆ ನಾನೂ ||೧||

ಝುಂಜೋಟಿ ರೂಪಕ

ಯೇತರದಾ ಚಿಂತೆ ಮನದೊ | ಳಾತು ಕೊಂಡಿದೇ | ಈ ತೆರದಲಿ ಪೊಗಳುತಿಹುದು ಯಾತಕೆಂಬುದೇ || ರೀತಿಮೀರಿದ ಬಣ್ಣನೆಯಲಿ ಭೀತಿ ಹುದುಗಿದೇ | ಖಾತಿಗೈಯ ಬೇಡ ಮೋಸ ನೀತಿ ನೀಗಿದೇ ||೧||

ಬಿಹಾಗ ಅಷ್ಟ

ಬೇರೇನಿಲ್ಲಾ | ಘನತರನಲ್ಲಾ | ಬಾಲಭೋಜನ ಬಗೆಯರಿತಿಹೆಯಲ್ಲಾ | ಎನ್ನ | ದಾರಿಯ ದೊಡ್ಡ ಕಂಟಕವಾದನಲ್ಲಾ | ಸೈರಿಸಲಾರೆನಲ್ಲ | ಗೈವರಿ

ಬೇರಾರಿಲ್ಲ । ನಿನ್ನನು ಮೀರ್ವರಿಲ್ಲ । ನೀ....ಮಾಡಬೇಕಲ್ಲಾ ||೧||

ಜಜೆಂೋಟಿ ರೂಪಕ

ಪಾಪ ! ಭೋಜವಮಾಡಿದಾಪರಾಧವೇನಿದೆ ? ಕೋಪವೇಕೆ ಬಿಡು ಬಿಡ್ಡೆ ದಯಾಪರಾ ಜಪೇ ತಾಪವುಂಟುಮಾಡುವಾ ವಿಷವಾಗ ಬಲ್ಲದೇ ? । ಆಪ ಜವುಖ ಭೋಜ ಕುವರ ಶತ್ರುವಾದನೇ ||೧||

ಕೇತಾರ ಗೌಳ ಝಂಪೆ

ಬಿಡು ಬಿಡೈ ವತ್ಸರಾಯಾ । ನಿನ್ನೊಡನೆ । ನುಡಿದಂತೆ ಮಾಡದಿಹೆಯಾ || ಕಡುವೈರಿ ಭೋಜ ಕುವರಾ। ಆತನನು । ಅಡಗಿಪರೆ ವೇಳ್ವೆ ವಿವರಾ || ೧ || ನುಡಿದಂತೆ ನಡೆಯಲಿಕ್ಕೇ। ನಿನ್ನ ಕೈ । ಅಡಿಯಾಳೆ ಗದರಿಸಲಿಕೆ || ಕಡುಪಾಪಿ ಯೆಂಬರ್ಕೈಸೇ । ಜಗದೊಳಗೆ । ಕಡುಕ ಉಜ್ಜುಗವಿದ್ದೈಸೆ || ೨ || ಸಿಟ್ಟಿ ಗಿದು ಸಮಯವಲ್ಲ । ಬಾಲನನು । ಕುಟ್ಟಿಕೊಲ್ಲುವದು ಸಲ್ಲ || ಇಷ್ಟು ನಾ ಬಲ್ಲೆ ಬಲ್ಲೆ । ವೈರಿಯನು । ಇಟ್ಟುಕೊಂಬುದಕೆ ಒಲ್ಲೆ || ೩ || ಹಸುಳೆ ಯಿಂದಪ್ಪುದೇನೂ । ಭೋಜನಲಿ । ವಿಷಮಗುಣವಿಪ್ಪುದೇನೂ || ಕುಶಲ ಬಯಸುವದು ನಿನ್ನ । ಕರ್ತವ್ಯವೆಸುಗುವದು ಸಹಜ ಮುನ್ನಾ || ೪ || ಹುಡುಗನೆಂದೀಗಲವನಾ । ಬಿಟ್ಟೊಡೆಯು । ತಡೆಯದವ ಬೆಳೆದು ಜವನಾ|| ಬಿಡದಿಗೆನ್ನಟ್ಟಿ ಮುದದೀ । ಆಳುವನು । ಕಡೆಗವನು ಉನ್ಮಾದದೀ || ೫ || ಇಂಗುನಾಪೋಗಿಸುವನಾ ವಂಚಿಸುತ । ಕೊಂದು ಬಂದರೆಯು ನಿನ್ನಾ । ಮುಂದಿನ್ನೋಚನೆಯ ಮಾಡೂ । ದುಡು ಕದೆಯೆ । ತಂದೆ ಕನಿಕರವ ತೋರೂ || ೬ || ಪರಿವಾರ ನಿಡಿದೇ ಳ್ಪುದೂ । ಸಿಂಧುಲನ । ತರಳನನು ಪ್ರಜೆ ಪೇಳ್ವುದೂ || ಭರಿತ ದ್ರೋಹವ ಗೈದನೂ ; ತಮಗೆಂದು । ಉರಿದೇಳ್ವ ಪರಿಯನದನೂ || ೭ || ಬಲ್ಲೆ ಬಲ್ಲೆನು ಪ್ರಜೆಗಳಾ । ಚಳುವಳಿಯ । ನಿಲ್ಲಿಸುವೆ ದ್ರೋಹಂಗಳಾ || ಅಲ್ಲವಿ ನ್ನುವೆಯೊ ಪೇಳು । ಒಪ್ಪದಿರೆ। ಕೊಲ್ಲುವೆನು ನಿನ್ನ ತಾಳೂ ||೮ || (ಮುಂಜ ನು ಕಪಟದ ಸ್ನೇಹವನ್ನು ತೋರಿಸಿ ಆತನ ಕುತ್ತಿಗೆಗೆ ಕೈಯಿಕ್ಕಿ ಹಿಡುಕುವ ನು. ಇಬ್ಬರಿಗೂ ಘರ್ಷಣೆ–ಹೊಡೆದಾಟವಾಗಿ ವತ್ಸರಾಜನನ್ನು ಕೆಡವಿ ಚನ್ನಾಗಿ ತಿವಿದು ಒದೆದು ಸತ್ತುಹೋದನೆಂದು ಭಾವಿಸುತ್ತಾನೆ. ಅನಂತರ)

ಕಂದ ಪದ್ಯ

ಅಟ್ಟುವೆ ಕಟುಕರನೆನುತಲಿ| ದುಷ್ಟನು ಏಕಾಂತದಲಿ ಕರೆದು ಪೇಳಿದ ಸ್ಥಿತಿಯಂ|| ಗುಟ್ಟಾಗಿ ಮಾಡಿ ಕೊಲೆಯನು । ತಟ್ಟನೆ ನೀವ್ ತಂದು ತೋರ್ಪುದಾತನ ತಲೆಯಂ ||೧||

## ಪ್ರವೇಶ ೪ —

ಸಾಂ ತ್ಯ ರೂಪಕ

ಹಲಪುರೀತಿಯಲಿ ಪಂಬಲಿಸುತ್ತ ಕಟುಕರು ।ಕೊಲುವ ಕಾರ್ಯವ ತಂಪೆ ವಿಧಿಯೇ || ನಲವಿಂದ ಬಹುರೀತಿ ಉಪಕಾರ ಗೈದ ಸಿಂ । ಧುಲ ಕುಮಾರನ ಕೊಲ್ಲುವದೆಂತೂ ! || ೧ || ಇಂತು ದುಃಖಿಸುತ ಕಾರಾಗಾರಕ್ಕೈದುತ । ಸಂತಸದಲಿ ಮಲಗಿರುವಾ|| ಕಂತು ಸನ್ನಿಭ ಸುಂದರನನು ಕಾಣುತ ಲತಿ । ಸಂತಾಪದಿಂ ಬೆದರಾಗ || ೨ || ವಿಧಿಯಿಚ್ಛೆಯಿದ್ದ ತೆರನಾಗಬಹುದೆನ್ನುತ್ತ। ಒದಗಿಹ ಕಾರ್ಯದೆಚ್ಚರದಿ:|| ಮುದದಿ ನಿದ್ರಿಪ ನಿರ್ಮಲಾತ್ಮನ ಎತ್ತುತ ಪದುಳದಿ ಕೊಂಡೊಯ್ಯುತಿರಲೂ || ೩ || ತರಳನುಳಿವುವಾಣಿ ವರನ ಸಂಕಲ್ಪವೋ । ವರವಿಚಿತ್ರದ ಕಾಲಗತಿಯೇ || ದುರುಳ ಮುಂಜನ ಪಾಪ ಫಲವೋ ಮೃತ್ಯುವಿಗೆ ಮತ್ತೆ । ಕರುಣೆ ಬಂದುದೊ ಏನನೆಂಬೇ || ೪ || ಮರಣ ಮಂಚದಲಿರ್ಪ ವರವತ್ಸರಾಯನು । ಅರಿವು ಬಂದೆದ್ದು ನೋಡಿದನೂ || ಸದಳತನ ಪ್ರಾಣ ಪಾಲನೆಗೆನ್ನನುಳುಹಿದೆ । ಪರಮಾತ್ಮ ನೀನೆಂದ ನವನೂ || ೫ || ಏಳುತ ಬೀಳುತ ಬಾಲಕ ಎನುತಾಗ ಹಾಳಡವಿಯ ದೆಸೆವಿಡಿದಾ || ಕಾಲಪುರುಷನಿಗೆ ಕೈಮುಗಿವುತ ಹಲುಬುತ । ಶೀಲವತ್ಸಾಖ್ಯ ತಾ ನಡೆದಾ || ೬ || ಕಾನನ ಮಧ್ಯದಿ ಏಳುತ್ತಲಾ ಚಂದಿ । ರಾನನ ಭೋಜ ಸಾವರಿಸೀ || ತಾನಿಲ್ಲಿ ಬಂದಿಹ ಬಗೆಯೆಂತೋ ಹೇಗೆಂದು । ಬಾನ್ ಬುವಿ ನೋಡುತ ಕಂಡಾ || ೭ || ಯಾಗು ದುಷ್ಟಾತ್ಮರೆ ಚೋರರ ತೆರದೊಳು । ಸಾರಿಕರೆತಂದಿಹುದೇಕೆ || ಭೋರನೆ ಪೇಳ್ವಿರೋ, ಪೇಳದಿರ್ದಡೆ ನಿಮ್ಮ । ಕ್ರೂರರೆ ಬಿಡೆ ನಾನು ಜೋಕೆ ! || ೮ || ಎಂದು ರೋಷದಿಗಜ

ರುಪ ಬಾಲನನು ಕಂಡು । ಮಂದಹಾಸದಿ ನುತ್ತೈಸುತ್ತಾ ॥ ಕಂದ ತಾಳ್ಮೆ ತಾಳು ಸಾವಧಾನವ ನೀನು । ಎಂದು ತಳ್ಳಿಸುತ ಮತ್ತಾಗಾ ॥ ೯ ॥

ಕಂದ ಪದ್ಯ

ಭೋಜನೆ ಸುಂದರ ವದನಾಂ । ಭೋಜನೆ ಸುಗುಣಾಂಬುರಾಶಿ ರಾಜನೆ ನಿನ್ನಂ॥ ರಾಜಾಜ್ಞೆಯಂತಿ ತಂದೆವು । ನೈಜ ಶುಭಾಕಾರ ನೃಪಕುಲಾಲಂಕಾರಾ ॥ ೧ ॥

( ಭೋಜಕುಮಾರನು ಕಟುಕರನ್ನು ಕರೆದು ತನ್ನನ್ನು ಕೊಲ್ಲುವ ಮೊದಲು ಮುಂಜರಾಜನಿಗೆ ಪತ್ರವೊಂದನ್ನು ಕೊಡುತ್ತೇನೆಂದು ಹೇಳಿ, ತನ್ನ ತೊಡೆರಕ್ತದಲ್ಲಿ ಸಣ್ಣ ಕಡ್ಡಿಯನ್ನದ್ದಿ ವಟಪತ್ರದಲ್ಲಿ ಈ ಕೆಳಗಿನ ಪ್ರಬಂಧವನ್ನು ಬರೆದು ಕೊಡುತ್ತಾನೆ.)

ಶ್ಲೋಕ—

ಮಾಂಧಾತಾಚ ಮಹೀಪತಿಃ ಕೃತಾಯುಗಾಲಂಕಾರಭೂತೋ ಗತಃ । ಸೇತುರ್ಯೇನಮಹೋದಧೌ ವಿರಚಿತಃ ಕ್ವಾಸೌ ದಶಾಸ್ಯಾಂತಕಃ ॥ ಅನ್ಯೇ ಚಾಪಿ ಯುಧಿಷ್ಠಿರಪ್ರಭೃತ ಯೋ ಯಾತಾ ದಿವಂ ಭೂಪತೇ । ನೈಕೇನಾಪಿ ಸಮಂ ಗತಾ ವಸುಮತೀ ಮುಂಜತ್ವಯಾ ಯಾಸ್ಯತೀ ॥ ೧ ॥

( ಅಷ್ಟರಲ್ಲಿ ಕಟುಕರು ತಲೆ-ಬಾಗಿನಿಂತ, ಭೋಜನ ಕೊಲೆಗೆ ಖಡ್ಗ ಹಿಡಿದು ನಿಂತಾಗಲೇ ವತ್ಸರಾಯನು ಬೀಳುತ್ತೇಳುತ್ತ ಓಡಿ ಬಂದು, ' ತಡೆಯಿರಿ, ತಡೆಯಿರಿ ” ಎಂದು ಅವರನ್ನು ತಡೆಯುವನು.)

॥ ದೇಶಿ ಅಷ್ಟ ॥

ಪಾಪ ! ಉತ್ಪನ್ನವಿತ್ತು ಸಲಹಿರುವಂಥ । ಭೂಪ ಸಿಂಧುಲ ಕುವರನೀ ಸುಕಲಾಪ, ಕೊಲೆಯಿದು ಸಲ್ಲದೈ ॥ ೧ ॥ ಅತ್ತ ತಕ್ಷಕ ಮಾಟಗಾರನ ಕರೆ । ದುತ್ತಮದ ಶಿರವೊಂದನೀಗಲೆ । ಕೃತ್ತಿಮವಿ ಮಾಡೆನುತಲಿ ॥ ೨ ॥ ಎನುತ ಲೋಡುತ ಬುದ್ಧಿಸಾಗರನಲ್ಲಿ । ಇಸಿತನೆಲ್ಲವ ಅರುಹಿ ಬೇಗದಿ ವನಕೆ ಕರೆತರುತಿರ್ದನೂ ॥ ೩ ॥ ಬಂದು ಕ್ಷತಕದ ತಲೆಯ ಚಾಂಡಾಲರಿ । ಗಂದು

ಒಪ್ಪಿಸಿ ಕ್ರೂರ ಮುಂಜಗೆ। ತಂದು ತೋರಿಸಿರೆನುತಲೇ ॥ ೪॥ ಸುದ್ದಿಯಿ ಲ್ಲದೆ ಭೋಜ ಕುಮಾರನ। ಬುದ್ಧಿಸಾಗರನೊಯ್ದು ಮೇಲೆ। ಕುಬುದ್ಧಿಯಿ ಡೆಗೈ ತಂದರೂ ॥ ೫॥

॥ ನಾದ ನಾಮಕ್ರಿಯೆ—ಅಷ್ಟ ॥

ಭರದೊಳ್ ಬಂದಿಪ ಕಟುಕರ ಕಂಡ । ಮತ್ತೆ। ಕರದಿ ಶೋಭಿಪ ಶತ್ರು ವಿನ ರುಂಡ ॥ ಹರುಷಾಬ್ಧಿಯೊಳು ಮುಳುಗೆದ್ದನು । ಕೊಂಡು । ಕರ-ಕರ ಕರ ಹಲ್ಲು ಕಡಿದನೂ ॥ ೧॥ ಹೋದನೆ ಶತ್ರು ಭೋಜಕುಮಾರಾ । ಮುಂದೆ। ಮೇದಿನಿಪತಿ ಯೆನ್ನ ಸುಕುಮಾರಾ ॥ ಆದಪನೆನ್ನುತ ಹರುಷದಾ । ಉ। ನ್ಮಾದಾತಿರೇಕದಿ ಕುಣಿದಾ ॥ ೨॥ ವತ್ಸಭೋಜನು ಕೊಟ್ಟ ಪತ್ರವಾ । ಅತಿ। ಉತ್ಸುಕನಾಗುತ ಮತ್ತವಾ ॥ ಎತ್ತಿಕೊಂಡದ ವಾಚಿಸುತ್ತಿರೇ।ಮುಂಜ। ಹತ್ತಿರ ದವರಾ ಹಿಡಿಯುತ್ತಿರೇ ॥ ೩ ॥

ಶೋ ೀಕ—ಪತ್ರ

ಮಾಂಧಾತಾಚ ಮಹೀ ಪತಿಃ ... .. ....
ಮುಂಜ ತ್ವಯಾ ಯಾಸ್ಯತಿ ( ಓದುತ್ತ-ಓದುತ್ತ ದೌಷ್ಟ್ಯವೆಲ್ಲ ಕರಗಿ ವಿಲಕ್ಷಣ ಪರಿವರ್ತನೆಯಾಗತೊಡಗುತ್ತದೆ.)

॥ ನೀಲಾಂಬರಿ ಝಂಪೆ ॥

ಅಯ್ಯಯ್ಯೋ ಮುದ್ದು ಭೋಜನೆ ನಿನ್ನ ಪಾಪಿ ನಾ | ಕೈಯ್ಯಾರೆ ಕೊಲ್ಲಿಸಿದೆ ನಲ್ಲಾ ॥ ಕೊಲುವ ಸಮಯದೊಳೆಷ್ಟು ಕಳವಳವ-ಪಟ್ಟೆಯೋ । ಘಳಿಲನೆ ನ್ನಜ್ಞಾನ ನಿಲದೋಡಿಸಿದೆಯೋ ॥ ೧॥ ಎನ್ನ ಕುಂಜರ ರಾಜ್ಯವನ್ನು ಪಾಲಿಸನೆಂಬ । ಎಣ್ಣಿಕೆಗೆ ದುಷ್ಕೃತ್ಯವನ್ನು ಗೈದಿಹೆನೂ ॥. ಅಧಮತನ ದೊಳು ಬಾಲವಧೆ ಗೈದುದಕ್ಕಗ್ನಿ ಹದಗೊಳಿಸಿ ತನು ದಗ್ಧಗೊಳಿಸಿ ಕೊಳ್ಳುವೆನೂ ॥ ೨ ॥

॥ ಭಾಮಿನಿ ॥

ಹದಗೊಳಿಸುತಗ್ನಿಯನು ಮುಂಜನು। ವಿಧಿನಿಯುಕ್ತದಿ ಸರ್ವಗೊಂದಿಸಿ। ಅಧಮನೆನ್ನಯ ಸಾವಿಗಳಲದೆ ತೋಷದೊಳು ನೀವೂ ॥ ಮುದದಿ ಬೀಳ್ಕೊಡಿ

ಮಹಿಷವಾಹನ। ಸದನಕೆನ್ನುತ ಸಿಂದಿರಲ್ಕಾ । ವಿಧಿ ವಿಚಿತ್ರದ ಲೀಲೆ ಮೋಜಿನ ದಾಯ್ತು ಮುಂಜನಿಗೇ ॥ ೧ ॥

(ಅಷ್ಟರಲ್ಲಿ "ಜೈ-ಪರಾಶಕ್ತಿ" ಎನ್ನುತ್ತ ಕಾಪಾಲಿಕನೊಬ್ಬ ಅಲ್ಲಿಗೆ ಬರುತ್ತಾನೆ)

॥ ಸೌರಾಷ್ಟ್ರ—ತ್ರಿಪುಡೆ ॥

ಕೇಳಿಪನು ಸತ್ತವರ ಬದುಕಿಸಿ। ಏಳಿಸುವ ತಂತ್ರವನು ಬಲ್ಲೆನು। ಪೇಳಿರೈ ಪೆಣವಿರ್ದುದಾದೊಡೆ ತರಿಸಿರೆಂದೂ ॥ ೧ ॥

॥ ಕಂದ ಪದ್ಯ ॥

ತರಿಸುತ ಭೋಜನ ಶವವನು। ಇರಿಸಿದರ್ ಕಾಪಾಲಿಕನ ಮುಂದೆ ಚಾರಕರಾಗಳ್ ॥ ವರಮಂತ್ರವಾದಿಯಾಕ್ಷಣ । ತರಿಸಿದ ಜೀವವನು ಕೃತಕ ಭೋಜನ ಶವಕೇ ॥ ೧ ॥

॥ ಸೌರಾಷ್ಟ್ರತ್ರಿಪುಡೆ ॥

ಕಂತು ಪುಳಕೋತ್ಸಹದಿ ತೋಷವಗೊಂಡು ಪರವಶನಾಗಿ ಕುಣಿಯುತ। ಕಂದ ಬಾರೈ ಮಗನೆ ಮೋಹದ ಚಂದಿರಾಸ್ಯ ॥ ೧ ॥ ಬಂದೆಯಾ ಮಮ ಹೃದಯವಾರಿಧಿ। ಚಂದ್ರಮನೆ ಬಾರೈ ಸುಗುಣನಿಧಿ। ನೊಂದೆಯಾ ಕಡು ಕೊಲೆಗಡುಕ। ಎನ್ನಿಂದಲಿಂದೂ ॥ ೨ ॥ ಕಂದ ಕರುಣೆಯೊಳ್ ಕ್ಷಮಿಸಲಾರೆಯ। ಮಂದಮತಿಯಾದೆನ್ನ ಕೃತ್ಯವ। ತಂದೆ ಸಿಂಧುಲನಿಂಗೆ ದ್ರೋಹವ। ತಂದ ಎನ್ನಾ ॥ ೩ ॥ ವಾಣಿಧವ ಪಣೆಯೊಳಗೆ ಬರೆದು ತಾ। ಕಾಣಿಸಿದ ಸಂಕೇತ ಮೀರ್ವರೆ। ಮಾನವರು ನಮ್ಮಿಂದ ಸಾಧ್ಯವೆ। ಮಾನವೇಶ ॥ ೪ ॥

॥ ಕಂದ—ಪದ್ಯ ॥

ಸುತ ಭೋಜನೆ ನಿನ್ನನುಪಮ। ಮತಿಬೆಳಕಿಗೆ ಕಾಣದಿಹುದೆ ಇಳೆಯೊಳ ಗೇನೂ ॥ ಅತಿಶಯ ವಿಭವದಿ ಪಾಲಿಸು। ಕ್ಷಿತಿಯನು ಸುರತತಿಯು ಭಾಪ್ಪು-ಭಾಪೆನ್ನುವವೋಲ್ ॥ ೧ ॥ ಕೃತಕದ ವೇಷವನುಂಮರೆ। ಸುತ ನಿಜರೂಪ ದಿಂದಲೆರಗಿನಿಂದಿಪ ವತ್ಸಾ ॥ ಅತಿ ಪ್ರೀತಿಯೊಳಾಲಿಂಗಿಸಿ। ಸುತ ಭೋಜನ ಜನ್ಮದಾತ ನೀ ಸಾರ್ಥಕನೈ ॥ ೨ ॥

ಧವಳಾರ ಏಕ

ಭಾರಿ ವೈಭವದಿಂದ ವೀರ ಭೋಜನಿಗೇ | ಧಾರಾನಗರದ ವಾರುಪತ್ಯವನೂ || ಮೀರಿದ ಹರುಷದಿ ಮುಂಜನೀಯೆ| ಸುರ | ವಾರ ಘೇಯೆಂದುದು ಮಂಗಲವಾಗೆ || ೧ ||

ಒಟ್ಟು ೯೩ ಪದ್ಯಗಳು

# ಕುರುಬರ ಕಾಳಿದಾಸ

ತೇಜೋವತಿ ನಗರ— ಆದರಧಿಪತಿ ವಿಜಯುವರ್ಮ. ಆತನ ಮಗಳು ವಿದ್ಯಾಧರೆ. ಚತುರೆ, ವಿದ್ಯಾವತಿ. ವಿವಾಹಯೋಗ್ಯಳು, ಅಪೂರ್ವ ಸುಂದರಿ. ಕಾಳಿಯ ಅನುಗ್ರಹಕ್ಕೆ ಪಾತ್ರಳಾಗಿದ್ದವಳು. ಆತನ ಮಂತ್ರಿ ಕುಮುದಪ್ರಿಯ. ಮಂತ್ರಿಯ ಮಗ ಕಲಾಧರ. ವಿದ್ಯಾಧರೆಯೊಟ್ಟಿಗೆ ಕಲಿತವ. ಸಮ ವಯಸ್ಕ. ಚಂಚಲ ಸ್ವಭಾವ. ವಿದ್ಯಾಧರೆಯಷ್ಟು ಪ್ರತಿಭೆ, ಪ್ರಜ್ಞೆಯಿಲ್ಲ. ಆತನಿಗೆ ತಂದೆಯ ಮಾತು ವೇದವಾಕ್ಯ. ಒಂದು ದಿನ ವಿಜಯವರ್ಮನು ಆಸ್ಥಾನದಲ್ಲಿ....

ಕೇತಾರ ಗೌಳ ಅಷ್ಟ

ಒಂದುದಿವಸ ಯೋಚನೆಯಲಿ ಕುಳಿತಿರಲಾಗ | ಬಂದು ಕುಮುದಪ್ರಿಯನೂ|| ತಂದ ಭೂಪಾಲರ ತೈಲಚಿತ್ರಗಳನ್ನು ಚಂದದೊಳರ್ಪಿಸಲೂ || ೧ || ಕಾಣುತ ಪರಿತೋಷಗೊಂಡು ಮಂತ್ರಿಯೊಳೆಂದ | ಈ ನರೇಂದ್ರರ ವರ್ಗದೀ || ಮಾನಿನಿ ಮಣಿ ಧರೆಗನುರೂಪನಾಗಿಹ ಪ್ರಾಣೇಶ ತಾನಿಹನೇ? || ೨ || ಕುವರಿ ವಿದ್ಯಾಧರೆಗಿವನೆಲ್ಲ ತೋರಿಸಿ | ವಿವರವ ಪೇಳುವಡೂ || ಭುವನೇಶ ಒಳಗವೊಳೊಬ್ಬನ ಆರಿಸೆ | ಧವನ ಬೇಗದಿ ಮಾಳ್ಪುದೂ || ೩ ||

( ವಿಹಾರಕ್ಕಾಗಿ ವಿದ್ಯಾಧರೆ ಸಖಿಯರೊಡನೆ ಉದ್ಯಾನಕ್ಕೆ ಬರುತ್ತಿದ್ದಾಳೆ.)

|| ಸೌರಾಷ್ಟ್ರ ಅಷ್ಟ ||

ಕಾಮನರಸಿ ಸಮರೂಪೆ ವಿದ್ಯಾಧರೆ | ಬಂದಳಾಗ || ತನ್ನ | ಕೋಮಲ ಕಂಠದಿ ಹಾಡುತ ಕುಣಿಯುತ | ಬಂದಳಾಗ || ೧ || ಚತುರಭಾಷಿಣಿ ವಿಲಾಸಿನಿಯರ ಕೂಡುತ್ತ | ಬಂದಳಾಗ || ಸರ | ಸ್ವತಿಯೋ ಮೋಹ್‌ಗಿರಿಜೆ ಸುಮನಸ ಸತಿಯೆಂಬಂತೆ | ಬಂದಳಾಗ || ೨ ||

|| ಶಂಕರಾಭರಣ ಏಕ ||

ಭಲರೇ ಏನ್ ಸೊಬಗು ದೋರುವದಿಲ್ಲಿ | ಸ್ವಷ್ಟಿ | ಲಲನೇ ವಸಂತನ

ವರಿಸುತಿಲ್ಲೀ || ಚೆಲುವಿನಿಂ ಅರಳ್ದ ಅರವಿಂದವಂತೇ | ತನ್ನ ಬಳಿಗೇ ರಸಿಕ ವೃಂದ ಎಳೆವಂತೇ ||೧|| ವನದೇವಿ ಚೈತ್ರನ ವರಿಸಿದಂತೇ| ನೀನು | ಅನು ರೂಪ ವರನ ವರಿಸುವೆಯಂತೇ || ಅರಳಿದ ಸುಂದರಿ ಸರೋಜದಲೀ | ಆವ| ಪುರಷಭ್ರಮರ ಬರುವದೊ ಬರಲೀ || ೨ ||

ಕಂದ ಪದ್ಯ

ಎಂದೀ ಪರಿಯಿಂದಲಿ ಚ| ಕ್ಕಂದವನಾಡುತ್ತಲಿರ್ಪ ಸಮಯದೊಳಾಗಳ್| ಚಂದಮೊಳೈತರುತಿಹ ತ| ತ್ತಂದೆಯ ಪಾದಾರವಿಂದದೆಡೆಯೊಳ್— ನಮಿಸುತಾ ||೧||

ಬೇಗಡೆ ಅಷ್ಟ

ತಾತ ಧಾವಿಸುತಿಲ್ಲಿಗೇತಕೆ ಬಂದೇ | ರೀತಿ ನೋಡಿದರತಿ ಕಾತರವೆಂದೆ|| ನಾ ತಿಳಿದೆ ನೀ ಬಂದ ಪರಿಯನು | ಪ್ರೀತಿಯೊಳ್ ಪೇಳುವದು ಬೇಗನೇ ||೧|| ಚಲುವೆ ವಿದ್ಯಾಧರೆ ನೋಡೆ ನೀನಿವರಾ | ಒಲವಿನೊಳಾಯ್ದುಕೊಂಬುವುದು ಒಬ್ಬವರ || ನಲವಿಂದ ಗೈವೆ ನಾ ನಿನ್ನ ಲಗ್ನವನೂ || ಇಳೆಯ ಭೂಪರ ಚಿತ್ರ ಮಂತ್ರಿ ತಂದಿಹನೂ||೨||ಕಂದಿದಾನನದಿ ಮೌನದೊಳಿರ್ಪ ಬಗೆಯಾ | ತಂದೆ ಕಾಣುತ ಪೇಳ್ದ ಬೀರುತ-ನಗೆಯಾ || ಸುಂದರಾಂಗಿಯೆ ಪೇಳು ಮನ ದಂದವನ್ನೂ| ಇಂದು ಪೂರೈಪೆ ಬಿಡು ಸಂದೇಹವನ್ನೂ ||೩|| "ಕನ್ಯಾ ವರಯತೇ ರೂಪಂ" ಎನ್ನುವ ವಚನಾ | ವನ್ನು ನೀ ನರಿಯೆಯಾ ಹಿಂದೆ ಆ ಕಚನಾ || ಕನ್ನೆ ಸುರಯಾನೆ ತಾ ನಂಬಿಕೊಂಡಿರುವಾ| ದನ್ನೆ ಮನದಾ ದರ್ಶವೆಂದು ನಂಬಿಹೆನಾ ||೪|| ಕಂತುವ ಮೀರಿರುವಂಥ ಸುಂದರರಾ | ಇಂತು ಸಮ್ಮತಿಸದೆ ಬಿಡುವೆ ನೀನವರಾ ||ಅಂತರಂಗದ ಪ್ರೇಮ ಪೀಠದೆ ಮೆರೆವಾ | ಅಂಥ ಮಹಿಮರಾರು ಪೇಳೆ ನಿನ್ನೊಲವಾ ||೫|| ಚಿತ್ತವ ಬಲಿ ಗೊಟ್ಟು ರಸಹೀನವಾದ | ಮುತ್ತುಗದ ಸುಮ ತುಂಬಿ ಮುತ್ತುವದಿಲ್ಲ || ಉತ್ತಮವೇದ-ಪುರಾಣಶಾಸ್ತ್ರಗಳಾ| ತತ್ವಾರ್ಥವರಿತ ಜ್ಞಾನಿಯೆ ಎನ್ನನಲ್ಲಾ||೬

ಕಂದ—ಪದ್ಯ

ಕಾಳಿಯ ಕೃಪೆ ಹೊಂದಿರುವ ಸು|ಶೀಲೆಯ ಮಾತುಗಳ

ಭೂಪಂ ಪೇಳುವ ಪ್ರಧಾನನೊಂದಿಗೆ ತಾಳ್ದೆ ಸಂತೋಷವೆನುತ ಪೊರಟ ನಿಜ ಮಂದಿರಕಂ |೧||

|| ಕಾಂಬೋಧಿ ಝಂಪೆ ||

ಕರೆದು ಮಂತ್ರಿಯೊಳೆಂದ । ತರಳೆಯಾಶವಂತೆ । ಪರ ಶೋಧನೆಯು ಗೈದು ಬರುವವೆನ್ನುತಲೀ ||೧|| ದೂರ ಪೋಗುವದೇಕೆ । ವೀರನೆನ್ನಯ ತರಳ ನಾರಿ ವಿದ್ಯಾಧರೆಯ । ಓರಿಗೆಯುನವನೂ || ಮೀರಿರುವ ಬುದ್ಧಿ-ಬಲ ಸಂಪನ್ನ ತಾನನಸು । ಧಾರಿಣಿಪ ಮನದೊಳುವಿ । ಚಾರಿಸುತ ನೋಡ್ವೈ ||೨|| ಕೇಳಿ ಎನ್ನಯ ಬಾಲೆ ಮನದಿಂಗಿತವನರಿತು । ನಾಳೆ ತಿಳಿಸುವೆ ಮಂತ್ರಿವರ್ಯ ||೩| ಇತ್ತ ಏಕಾಂತದಲಿ ಹತ್ತಿರಕೆ ಕುಮುದಪ್ರಿಯ । ಪುತ್ರನನು ಕರೆದು ತಾ । ನಿತ್ತನುಪದೇಶ ||೪|| ಕಾಮಿನೀ ಮಣಿ ವಿದ್ಯಾಧರೆಯೊಡನೆ ಒಡನಾಡಿ । ಪ್ರೇಮಾಂಕುರಿಸೆ ಯತ್ನಮಾಡೂ || ಕಾಮಬಾಣದ ಬಾಧೆಗೀಡುಗೈಯುತ ಮತ್ತೆ । ಆ ಮನೋಹರೆಯುನೀ ಕೂಡೂ ||೫||

|| ಬಿಲಹರಿ—ಅಷ್ಟ ||

ಬಂದ ಕಲಾಧರ ಬೇಗ । ತನ್ನ । ಮಂದಿರದಿಂ ಸುಂದರಿಯ ನೆನೆವುತಾಗಾ || ಕಂದರ್ಪನರಸಿಯ ಧಿಕ್ಕರಿಸುವ ಸುಮ । ಗಂಧಿ ವಿದ್ಯಾಧರೆಯ ಸ್ವಪ್ನದ । ಮಂದಿರವ ಕಟ್ಟುತ್ತಲೀ ||೧||

ಮಧ್ಯಮಾವತಿ, ಅಷ್ಟ

ಕಂಡ ಕಲಾಧರನೂ । ಮೋಹನೆಯನ್ನು । ಕಂಡ ಕಲಾಧರನೂ || ಕಂಡ ತಂಗದಿರ ಮಂಡಲವ ಮೀರ್ವುದೋಯೆಂಬ । ದುಂಡುಕುಚೆಯ ಮುಖದಂದವ ನೋಡದೀ ||೧|| ಕಾಮಖಂಡೆಯದ ಸಿರೀ । ಲೋಕದೊಳೊಂದು । ಪ್ರೇಮ ರಸದ ಐಸಿರೀ || ನೋಡಲೂ । ರಸಗಂಗೆಯಲಿ ಮುಳು । ಗಾಡಲೂ । ಒಣವೆ ನಾ ಮನ । ಮಾಡಲೂ । ಇವಳೊಡನೆ ನೆನಸು ಮಾ । ತಾಡಲೂ । ಎನ್ನಾಶಯಕೆ ಪ್ರತಿ । ಯಾಡಳೂ । ಮನಸಿನ । ಕಾಮನೆಗೆ ಕೃತಿರೂಪವೀವೆನು । ತ್ರಾಮನೋರಮೆಯೆಡೆಗೆ ಬರುತಲಿ ||೨|| ಬಾರೈ ಕಲಾಧರನೇ । ಆಸನವನ್ನು ಏರೈ ಎನ್ನೀಹಿಗನೇ || ಸಾರಿಬಂದಿಹ ಕಾರಣವ ಪೇಳು ಪೇಳೀಗ । ಈ ರೀತಿ ಅಪರೂಪ । ಸ್ವಾರಿ ಚಿತ್ತೈಸಿತೆ || ೩ || ಎನಲು ಚಂಚಲ ಗೊಳುತಾ । ಕಲಾಧರ । ಮನದಿ ಶಂಕೆಯ ತಾಳುತಾ || ವನಜಾಕ್ಷಿ ನಿನ್ನ ಪರಿಣಯದ ನಿರ್ಬಂಧವ । ಅನುವಿನಿಂ ಅರಿಯಲೋಸುಗ ಇಲ್ಲಿಗೈತಂದೇ ||೪|| ವೇದಶಾಸ್ತ್ರಂಗಳಲೀ । ಧೀರತೆಯಿಂದ । ವಾದಿಸಿ ಗೆಲುವನಲೀ || ಭೇದಭಾವವ ಬಿಟ್ಟು,

ವಿಖ್ಯಾತಳಾಗಿಯೆ । ಹಾರ್ದಿಕವಾಗಿ ಪತಿಯೆಂದು ಸಮ್ಮತಿಸುವೇ ॥ ೫ ॥

॥ ಬೇಗಡೆ—ಏಕ ॥

ಕೇಳು ವಿದ್ಯಾಧರೆಯೆ ಪೇಳ್ವುದನೂ । ಕೇಳುತ್ತ ಮನದಲಿ । ತಾಳದಿರು ನೀ ಕ್ರೋಧಭಾವನನೂ ॥ ಬಾಲ್ಯದಿಂದಲೆ ಎನ್ನನರಿತಿಹ। ಶೀಲೆ ನಾ ಶಾಸ್ತ್ರಾದಿ ವಿದ್ಯೆಯೊಳ್ । ಮೇಲ್ಮೆಯಾ ಧೀಮಂತನೆಂದು ವಿ। ಶಾಲನಯನೆಯೆ ನಂಬಿ ವರಿಪುದು ॥ ೧ ॥ ವಾದವಲಿ ನೀನೆನ್ನ ಸೋಲಿಸುತ । ಗೆದ್ದೊಡೆಯು ನಾನು ಕ್ಷ್ಮಾಧರನೆ ಮನವಾರೆ ಒಲಿಯುತ್ತ ॥ ಮೇದಿನೀಸುರ, ರಾಜ, ಮಂತ್ರಿಗ। ಳಾದಿ ಸಕಲರ ಸಮ್ಮುಖದಿ ನಾ । ನಾದರದಿ ಕರ ಪಿಡಿವೆನಿದು ಅ।ಬಾಧಿತವೂ ಪುಸಿಯಲ್ಲವೈ ಧಿಟ ॥ ೨ ॥ ಛೇ-ಮನೋಹರೆ ಇತ್ತ ನೀ ಬಾರೇ । ಸಂತ ವಿಸು ಎನ್ನನು। ಕಾಮನಾಟದಿ ಮುದವನೀ ತೋರೇ ॥೩ ॥ ದುಷ್ಟ ಕಾಮುಕ ಸುಖದಿ ನೀ ತೊಲಗೂ ॥ ನಿನ್ನಪ್ಪಗೋಸುಗ । ಪೆಟ್ಟ-ತಿನ್ನದೆ ತತ್‌ಕ್ಷಣವೆ ಹೊರಡೂ ॥ ಇಷ್ಟಕೂ ನಿಂತಿರ್ಪೆಯಾದೊಡೆ । ಭ್ರಷ್ಟ ನಿನ್ನಯ ಹಲ್ಲುಕಳ ಚುವ। ಅಷ್ಟಕೂ ಹೊಡೆಯುತ್ತ ಎರಡೂ। ರಟ್ಟೆ ಹಿಸುಕಾಡುತ್ತಬಿಡುವೆನು॥೪॥ ಎನುತ ಸಖಿಯರ ಕರೆದು ಹೊಡೆಯಿಸಲೂ । ಕ್ಷಮಿಸೆಂದು ನಮಿಸುತ । ಮನದಿ ನಾಚುತ ತೆರಳಿ ತಂದೆಯೊಳೂ ॥ ೫ ॥

ಮಾರವಿ—ಏಕ

ಅರುಹೆ ಕುಮುದಪ್ರಿಯ ಕೋಪವತಾಳುತ । ದುರುಳಗೆ ಮದ್ದರಿವೇ ॥ ಅರೆ ಯಕ್ಷರ ಪರಿಜ್ಞಾನವಿಲ್ಲದಿಹ ಮರುಳನ ಕರೆತರುವೇ ॥೧॥ ಮದುವೆಯ ಮಾ ಡಿಸಿ ವಂಚನೆಯಿಂದಲಿ । ವಿಧ ವಿಧ ಕಷ್ಟಗಳಾ ॥ ವಿಧುಮುಖಿ ಹೊಂದುವ ತೆರಗೈಯದಿರೆ ತಾ। ನಿದು ಮೀಸೆಯೆ ಎನುತಾ ॥೨॥

॥ಭಾಮಿನಿ॥

ಎಂದು ಸುಂದರ ಧಡ್ಡನನು ತಾ । ನಂದು ಅರಸುತ ಬರಲು ವನದೊಳು । ಹಿಂದೆ ಗುರುವಿಗೆ ಮಾರ್ನುಡಿದ ಕತದಿಂದ ಕುರುಬರಲಿ॥ ಕಂದನಾಗಿಯೆ ಬಿದ್ದ ಕಾಳನು। ಮಂದಿಗಳ ಕೂಡುತ್ತ ಮೋದದಿ । ಮಂದಮತಿ–ಅಜ್ಞಾನಿಯೋಲ್ ವಿಹರಿಸುತ ಪೌಲಿನಲೀ ॥೧॥

( ಇಲ್ಲಿ ಯಕ್ಷಗಾನಆಟ–ಅಂತರ್ನಾಟಕದಂತೆ, ಅಥವಾ ಕೋಲಾಟವನ್ನು ಆಡಬಹುದು. )

॥ ಆರ್ಯ...ಏಕ ॥

ಶಿಗಳಕ್ಕ, ಶೀಬಣ್ಣ, ಮಾರ್‍ಯಾ, ಮುದಿ ಕೆಂಚಣ್ಣ। ಹೋಗಿ ಸೊಪ್ಪ ಇದ್ರು ಮತ್ತ ತೆಗೆಯೀಟಾ। ನಗ್ತಾ ಬಾಯಾಗ ಬಲು ಶಂದಾಕಿ ಕಟ್ಟವ್ನೆ। ಭಗ ವಂತನ ಮ್ಯಾಗೆ ಪಡವೀಟಾ ॥ ೧ ॥

॥ ಲಾವಣಿ...ಪದ್ಯ ॥

ಮುಕ್ಕಣ್ಣನೆಲ್ಲರು ಕೊಂಡಾಧಿರೋ। ಸರ। ಣಿಕ್ಕಿ ಸೋಮೇಸನ ಕೊಂಢಾಢಿರೋ॥ ಸ್ರೀಕಾರ ಇಗ್ನೇಸ ಸರಣು। ಯಲ್ಲ। ಲೋಖರಕ್ಷಕಪ್ಪಾವ ಸರಣೂ ॥ ಸ್ರೀಕಂಟ ಪುಥ್ರನೆ ಸರಣು। ನಮ್ಮ। ಯಾಖದಂತನೆ ಶರಣು ಸರಣು॥ ೧ ॥ ನಮ್ಮೂರ ಜಟ್ಗಾನ ಜಾತ್ರಿ। ಆಗ। ಬೆಳ್ಳನೆ ಬೆಳಧಿಂಗಳ ರಾತ್ರಿ। ಯೆಲ್ರಿಗೂ ಪಾನಕಾದ ಪಾತ್ರೆ। ಆವಗೇ। ಮಲ್ಲಿಗೆ ಹೂವು ಭಿಲ್ಪತ್ರೀ ॥ ೨ ॥ ಈಬೂತಿ ರುದ್ರಾಸ್ಕಿ ಯೆಕ್ಕಿ। ವಳ್ಳೀ। ಸೋಬಾನವಾಡ್ತಾಳೆ ಲಕ್ಕಿ॥ ವೂಬತ್ತಿ ದೀಪಾವನಿಕ್ಕೀ ॥ ಪುತ್ತೆ। ಶೀಬಣ್ಣಗ, ಕೊಡ್ತಾಳೆಮಿಕ್ಕಿ ॥ ೩ ॥ ವಂಬಾಳೆ ಕಳಸವಮಾಡಿ॥ ಆಕ್ಸಿ। ತೊಂಬಿಟ್ಟೆನಾರ್ತಿಯು ನೀಡೀ ॥ ಸಾಂಭ್ರಾಣಿಯಾಕಿ ಸರಣ್ಮಾಡೀ। ಆವ। ನ್ನಂಬಿ ಪರಸಾದವ ಜೇಡೀ ॥ ೪ ॥ ಯೆಂಡ್ರೂ ಮಕ್ಕಾಳೆಲ್ಲರೂ ವುಂಡೂ। ಶಾನೇ। ಶೆಂಡುವ್ವ ಜವನಾ ಮುಡಕೊಂಡೂ॥ ಮೊಂಡಾಗಡಿಕೆಲೆಯಾಕ್ಯಂಡೂ। ಕುರಿ। ಯಿಂಡ ಸೇರ್‍ಸುತ್ತಾ ಬಿಡ್ಕೊಂಡೂ ॥ ೫ ॥ ಮುಕ್ಕಣ್ಣನೆಲ್ಲರು ॥

॥ ಮಧ್ಯಮಾವತಿ—ಏಕ ॥

ಈ ರೀತಿಹಾಡಿ ಮರವ ಮೇಲೆ ನೋಡಿ। ಏರಿ ಕೊಂಬೆಯು ಬುಡವ ಕಡಿವುದ ನೋಡೀ ॥೧॥ ಬರುತಿಹ ಮಂತ್ರಿ ಮಂತ್ರಕೆ ಮುಗ್ಧಮಾದಾ। ಉರಗಸೋಲ್ ಎವೆಯಿಕ್ಕದವಲೋಕಿಸುತ್ತಾ ॥ ಅರರೆಮನ್ಮಥನೋರಮಣೀಯಕರೂಪ। ನಿರು ಕಿಸೆಸುರಪಜ, ನಳಪ್ರತಿರೂಪ ॥ ೨ ॥ ತರುಣಿ ವಿದ್ಯಾಧರೆಗಿವ ಯೋಗ್ಯನಕ್ಕು। ಕರಪಿಡಿಸುತ ಮುರಿಯುವೆ ನವಳ ಸೊಕ್ಕು॥ ೩ ॥ ಕಡಿದರೆ ಬಿದ್ದು ಸಾಯುವೆ ಕೇಳು ನೀನೂ। ಒಡನಿಳಿದರೆ ಏನೋ ಪೇಳುವೆ ನಾನೂ॥ ೪ ॥ ಮಳ್ಳೀ ಕೊಂ ಬೆಯು ಬೀಳ್ತೈತಾ ನನ್ ಮ್ಯಾಲೇ ಒಳ್ಳೇ ಶಾಣಿದಿಯೋ ನಾನವ್ನೆ ಮರದ ಮ್ಯಾಲೇ ॥ ೫ ॥ ಎಲ್ಲಿ ನಿಮ್ಮೂರು ಯಾಕಿಲ್ಲಿ ಬಂದಿಹೆಯಾ। ಎಲ್ಲಾ ಪೇಳಿ ದರೆ ನಿನಗೀವೆ ಉಡುಗೊರೆಯಾ॥ ೬ ॥ ಮಾರಿಲ್ಲ ಎಲ್ಡೇ ವಂದೆತ್ತು ಕ್ವಾಣೊಂದು। ಮಾರಿಲ್ವಾ ಕಣ್ಣಿಲ್ವಾ ಗ್ವಾಲೈತಿ ನಂದೂ ॥ ೭ ॥ ಹರಹರ ಪ್ರಾರಬ್ಧವೆನ್ನುತ

ಳಿಂದೂ । ಕುರುಬ ‌, ನೀನುಂಬುದೇನೆನುತ‌ ಪೇಳಿಂದೂ ॥ ಸನ್ನೆಯಗೈವುತ ಕೈ-ಬಾಯಿಂದಾ । ಮುನ್ನ ತಾನಿಳಿದನು.ಮರ ಕೊಂಬೆಯಿಂದಾ ॥೮॥ ಕುರುಬನ ಪರಿಯನರಿತು ಮಂತ್ರಿಯಾಗಾ । ಬರುವೆಯಾದೊಡೆ ಲಗ್ನ ವಿರಚಿಪೆ ನೀಗಾ । ಸುರಕನ್ನೆಯಂತೆ ಮೆರೆವ ವಧುವಿಹಳೂ । ಕರಪಿಡಿಯಲು ನಿನಗಾಗಿ ಕಾದಿಹಳೂ ॥೯॥ ಮರುಳು ಕುರುಬ ತನ್ನ ಸಂಸ್ಕೃತಿಯಂತೆ । ಹರಟುತ್ತಿರಲು ನವವಸ್ತ್ರವ ಮುಂತೇ ॥ ಧರಿಸು ಎನ್ನಪ್ಪಣೆಯಂತೀಗ ಹೊರಡೂ । ಕರಕರೆಗೈದೆಯಾದೊಡೆ ನೋಡು ಕೊರಡೂ ॥೧೦॥

ಭೈರವಿ ತ್ರಿಪುಡೆ

ಮಂತ್ರಿ ಕಾಳಗೆ ಬಗೆಬಗೆಯ ಷಡ್। ಯಂತ್ರಗಳನುಪದೇಶಿಸುತ ಮಾ।ರ್ಗಾಂತರದ ವಂಚನೆಯ ಹೊಸಹೊಸ। ತಂತ್ರಗಳ ಶೋಧಿಸುತಲೀ । ಬೋಧಿಸುತಲೀ । ಬಂದನಾಗಾ ॥೧ ॥ ಎಷ್ಟು ಕಷ್ಟವ ಮಂತ್ರಿ ತಾನುರೆ । ಪಟ್ಟನೋ ಮಮ ಮುದ್ದು ಪುತ್ರಿಗೆ। ಶ್ರೇಷ್ಠವರ ಸಿಕ್ಕಿದನೋ ಮತ್ತಿ । ನ್ನೆಷ್ಟುಸಮಯವೊ ಎನುತ ಚಿಂತೆಯೊಳ್। ಸೃಷ್ಟಿಪತಿ ಚಿಂತಿಸುತಲೀ । ಇರುತಿರಲಿಕೇ ॥೨॥ ಧೀನಿಧಿಯ ನೊಡಗೊಂಡು ಬರುತಿರೆ । ಆ ನರೇಂದ್ರನು ಚರಣಪಂಕಜ । ಕಾಸಿಸಿರೆ ಮುಕುಟವನು ಕಾಳನು। ತಾನು ಪರಸಿದ ಪ್ರಭವವಿಭವ....। ಎನಿದೆನ್ನುತನಿಂದಿರೇ । ಮಂತ್ರಿ ಪೇಳ್ದಾ ॥ ೩ ॥

॥ ಕಂದ ಪದ್ಯ ॥

ಪ್ರಭವಂ ಜನಪ್ರಮೋದಕೆ । ವಿಭವಾಸ್ಪದನಾಗಿ ನಂನಾನಂದ ವನಾಂ । ತಭಿವರ್ಧಿಸು ವಿಕ್ರಮದಿಂ । ಶುಭಕೃತ್ ವಿಜಯಮನೆ ತಳೆದು ಪಾರ್ಥಿವತಿಲಕಾ॥೧

ದೇಶಿ ಅಷ್ಟ

ತೆರೆಯ ಮರೆಯಲ್ಲಿ ನಿಂತ ವಿದ್ಯಾಧರೆ। ಮರುಳುಗೊಂಡಳು ಕುರುಬಕಾಳನ । ಭರಿತ ವಿದ್ಯೆಗು, ರೂಪಿಗೂ ॥೧ ॥ ಭುವನಪಾಲಕ ಜಯವರ್ಮ ತೋಷವಗೊಂಡು ತವಕದಿಂ ವಿದ್ಯಾಧಿದೇಪನ ವಿವರ ಪೇಳುವದೆಂದನೂ ॥ ೨

ಭೈರವಿ ರೂಪಕ

ಈತನುತ್ತಮ । ಜಾತಿಶೀಲ ವಿಖ್ಯಾತನುನ್ನತ । ನೀತಿಕೋವಿದ ॥ ಭೂರಿಸತ್ಕಳಾ । ವಾರ ಮಂಜುಳಾ । ಸಾರ ತತ್ವಸಂ । ಪೂರಿತಾತ್ಮನೂ ॥೧ ॥ ವೈರಿವರ್ಗ ವಿ। ದೂರನೀತನೂ ॥ ಚಾರುಮನ್ಮಥಾ । ಕಾರನೀಕ್ಷಿಸೂ ॥ ಈ ಮಹೀ

ತಲ । ದೀ ಮಹಾತ್ಮನೇ॥ಶ್ರೀಮನೋಜ್ಞನು।ದ್ದಾಮ ಪಂಡಿತಂ ॥೨ ॥

॥ ನಾಟಿ—ಮಟ್ಟೆ ॥

ಆಯತಾಕ್ಷಿಗೇ । ಹರ್ಷ । ವಾಯು ತುಂಬಿರೇ। ಕಾಯಸಂಭವ ಬಿಟ್ಟ ಬಾಣದಿ। ಗಾಯಗೊಂಡಿರೇ । ಸ್ಥೈರ್ಯ। ಮಾಯವಾಗಿರೇ ॥ ೧ ॥

॥ಕಂದ ಪದ್ಯ ॥

ಚಿತ್ರವನೀಕ್ಷಿಸಿ ಕಾಳ ವಿ। ಚಿತ್ರಾಸು ಭವವನಾಂತು ರಾಭಣ ರಾಭಣೆ ॥ನುತ್ತಿರೆ ಸೋಜಿಗ ಪೊಂದಿದೆ। ಮತ್ತದಕೇಳುತ್ತ ಕುಮುದ ಪ್ರಿಯತಾ ಪೇಳ್ದಂ ॥೧॥

॥ ಶ್ಲೋಕ ॥

ರಾಕಾರೋ ರಾವಣೇಭಾತಿ । ಕುಂಭಕರ್ಣೇ ವಿಭಾತಿಭಃ॥ ವಿಭೀಷಣೇ ಣಕಾರೋಸ್ತಿ । ರಾಭಣೋನಚ ರಾವಣಾಃ ॥ ೧ ॥

॥ ಕೇತಾರ ಗೌಳ ಝಂಪೆ ॥

ಕೇಳಿ ಸಂತಸವಾಂತನೂ। ಧೀಮಂತ । ಶೀಲೆಗಪ್ಪನು ಕಾಂತನೂ ॥ ಬಾಲೆ ಸಂತೋಷವೇನೇ । ಬಿಡುಮನದ। ಆಲಸ್ಯ ಕಮಲನಯನೇ ॥೧॥ ಮೌನ ಸಮ್ಮತಿಯೆನ್ನುತಾ | ಜಯವರ್ಮ । ತಾನು ಆಣತಿಯೀಯುತಾ ॥ ಸಾನುರಾಗದಿ ವಿಪ್ರನಾ। ಮಗಳಿಂಗೆ।ಪಾಣಿಗ್ರಹಣವೆನ್ನುತಾ ॥ ೩॥ ಕರೆಸುತ್ತ ಭೂಸುರರನೂ।ಸಂಭ್ರಮದಿ ವಿರಚಿಸುತ ಲಗ್ನವನ್ನೂ॥ ಭರಿತ ತೋಷವ ಗೊಂಡನೂ। ಕುರುಬನೊಳು । ಧರಣಿಪತಿ ಇಂತೆಂದನೂ ॥ ೩ ।

॥ಕಂದಪ–ಪದ್ಯ॥

ಇಂದಿನ್ನ ನಂದನೆಯು ಅ।ನಂದದೆ ನೀಂ ವರಿಸಿ ಮುದವನೆಸಗಿದಿರೆನ್ನೊಳ್ ॥ ಇಂದಿರೆಯುಂ ವರಿಸುತ್ತೆ ಮು।ಕುಂದಂ ಹರ್ಷಿಸಿದ ತೆರದೆರತ್ನಾಕರನಂ ॥೧ ॥

× × * × ×

॥ಕಂದಪದ್ಯ॥

ದೂತಿಯು ಬಿನ್ನವಿಸಲು ತಾ। ಪ್ರೀತಿಯುಮಿಗೆಸಂಭ್ರಮದೊಳು ಶಯ್ಯಾಗೃಹಮಂ ॥ ಓತು ಒಳಪೊಕ್ಕು ಸೌಂದ । ರ್ಯಾತಿಶಯಕೆ ಮನವ ಮಾರುಗೊಟ್ಟನು ಕಾಳಂ ॥ ೧ ॥

(ಶಯ್ಯಾಗಾರದಲ್ಲಿ ಪೊದ್ದ ಬಟ್ಟೆಯನ್ನೇ ಹಾಸಿಕೊಂಡು ಮುರುಟಿ

ಮಲಗಿರುತ್ತಾನೆ. ನಿಷ್ಟೆ ಸಹಜವಾಗಿ ಬರುತ್ತದೆ. )

|| ಸೌರಾಷ್ಟ್ರ...ತ್ರಿಪುಡೆ ||

ಬರುತ ವಿದ್ಯಾಧರೆಯು ಕಂಡಳು | ಉರುಳಿನೆಲದಲಿ ಒರಗಿರುವ ತ|ನ್ನರಸನ ನಾಚಿತ ವರ್ತನೆಗೆ ಬಲು|ಬೆರಗುವಡುತಾ ||೧|| ವರಮನೋಹರ ಏಳು ತಂದಿಹೆ ಪರಿಮಳದ ಗಂಧಾದಿದ್ರವ್ಯವ | ಸುರುಚಿ, ಕರ್ಪೂರ ಮಿಶ್ರ ವೀಳ್ಯ | ವೆಜ್ಜರವ ಗೊಪ್ಪು||೨|| ಕನಸಿನಲಿ ಹಲಬುತಿರೆ ತನ್ನ ಕೇ|ಳ್ವನದ ಸಂಸ್ಮೃತಿಗೊಪ್ಪುವ್ರೋಲ್ ಕೇ|ಳ್ದನು ಭವಿಸಿದಳು ಕಾಮಿನೀಮಣಿ| ಮನದಿ ವ್ಯಥೆಯಾ ||೩.||

||ಕಮಾಚ್ ಅಷ್ಟ||

ಮಾತಾಡಬಾರದೇನೋ| ಮೋಹದವನಲ್ಲಿ ಮಾತಾಡಬಾರದೇನೋ || ಪ್ರೀತ ಮನ್ಮಥ ಶಾಸ್ತ್ರ|ಚಾತುರ್ಯವೆನ್ನೊಳು | ಖಾತಿಯೊ ಳಿಂತು || ೧ || ತುಂಗಾಲಿಂಗನದಿಂದ | ಅಂಗಾಂಗ ಬಿಗಿದಪ್ಪಿ | ಅಂಗಜ ಜ್ವರವ ನೀ|ಹಿಂಗಿಸದೀಪರಿ ||೨|| ನಿನ್ನನಂಬಿದ ಮನ|ದನ್ನೆಯೊಳ್ ಪ್ರೇಮವ| ನಿಸ್ಸರಿಸದೆ ಮೌನ|ವನ್ನು ತಾಳುತ ಪ್ರಿಯಾ || ೩ || ಆಕ್ಷಿತೆರೆಯೆ ಕಮ|ಲಾಕ್ಷಿ ಕಾಂತನಕೂಡೆ | ಇಕ್ಷುಚಾಪನಗೆಲೆ | ದಕ್ಷ ಧೀಮಂತನೀ| ಇತ್ತ ಬಾರೇಲೋ ಮೋಹನಾ | ಮನದನ್ನನೀ| ಇತ್ತ ಬಾರೆಲೋ ಮೋಹನಾ ||೪||

||ದೇಶಿ ಅಷ್ಟ||

ಏನನರಿಯದೆ ಗೌಣಭಾಷೆಯಲಿತಾ | ಏನನೋ ಹರಟ್ತುತ್ತಲಾಪ್ರ| ಧಾನಿಗೈದಿದ ತಂತ್ರವಾ ||೧|| ಕಾಳ ಕೂಲಂಕಷವಾಗಿ ಬಣ್ಣಿಸೆ ಬಿರು|ಗಾಳಿಯಾಘಾತಕ್ಕೆ ಸಿಲುಕಿದ | ಬಾಳೆಯಂದದಿ ಬಿದ್ದಳೂ || ೨ || ಹೊತುಹೋದುದೆ ಅಕಟಾ ಎನ್ನಯಬಾಳು | ಪಾತಕದ ಕೆಸರಾಳಪೊಳಗೆನು| ತಾ ತರಳೆ ಅಳುತಿರ್ದಳೂ || ೩ ||

"ಲಾವಣಿ" ಖರಹರಪ್ರಿಯ—ಏಕ

ಅಳಬ್ಯಾಡ ಕಾಣೆಸುಮ್ಕಿರೇ | ಯಲಾಯೆಂಡ್ರೆ | ಅಳಬ್ಯಾಡ ಕಾಣೆ ಸುಮ್ಕಿರೇ|| ಸೋಳಿಯಲ್ಲ, ಜೊರವಿಲ್ಲ | ಗೋಳಗೊಳೆಂತ ಅಳ್ತೀಯಾಕ! || ಅಳಬ್ಯಾಡ||೧|| ತೊಳೆದಾ ಗಂಗಾಳದಾಂಗೆ| ತಳಗುಟ್ಟೋನನ್ಮೊಕ| ಬೆಳಕ್ನಾಗೆನೋಡ್ದನ್ನ || ಬಲು ನುದ್ದಾದರಗಿಣಿ ||೨|| ಯಾರಿಗಿಂತಾ ಯೇನ್ಕಡ್ಮಿ || ವಾಂಗೆ ಶಂದಾ ಕಿಲ್ವಾ? | ಸೂರನಾನು ದೀರನಾನು| ಮಾರನಂತ ಗಂಡನಾನು || ೩ ||

ನಾಸಿಂಗೆ ಸಿಕ್ಕರೆ। ನೀನೆಂತ ಪುಣ್ಯಂತೆ। ಶಾನೆಸುಕಪಡಸ್ತೀನಿ। ಬಾ ನನ್ನಿಂದೆ ನಮ್ಮೂರಿಗೆ ||೪|| ತಾಳುತಾಳಂಗಳಬ್ಯಾಡನೀ। ಯೇಳಿದಾಂಗಕೇಳ್ನನ್ನಶಿನ್ನಾ। ಯೇಳ್‌ಯೇಳದಾಂಗ ಕೇಳ್ತೀನಿ। ಶಾಲೆ ವೊಕ್ಕೊಡ್ತೀಸಿ ||೫||

|| ನೀಲಾಂಬರಿ—ಏಕ ||

ಕೇಳಲಾರೆನು ಮಾತನೂ। ದೈವದ ಕ್ರೂರ। ಲೀಲೆ ಮುಂದೆಮ್ಮದೇನೂ ||
ಶೀಲ ಧೀಮಂತ ವರನಾ। ವರಿಪೆನೆಂದರೆ। ಸೋಲಾಯ್ತು ಈ ನರನ || ೧ ||
ಕೂಡಿ ಸುಖಿಸುವದೆಂತಯ್ಯಾ। ಬಿಟ್ಟರೆ ಉಭಯ। ಕೇಡೆಂಬ ವೇದವಾಕ್ಯ ||
ಗಾಢದಿ ಯತ್ನಿಪೆನೂ। ಕಾಳಿಯ ಪದದಿ। ಬೇಡಿನರಿಗೈದಪೆನೂ ||೨||

|| ಕಂದ ಪದ್ಯ

ಇಂತ್ರಾಲೋಚಿಸಿ ತನ್ನಯ। ಕಾಂತನ ಪರಿಶುದ್ಧಗೈದು ಕಾಳಿಯ ಗೃಹಕಂ || ಶಾಂತತೆಯಲಿ ಕರೆತರುತಲಿ। ಶಾಂತಿಕೆ, ಜಗದಂಬೆ ರುದ್ರಿಯೆಂದುರೆ ಭಕ್ತಿಯೊಳ್ || ೧ ||

|| ಮೋಹನ—ಆದಿ ||

ಕಾಳೀ। ಪದ ಪದ್ಮದಲ್ಲಿ ಶಿರವಾನಿಸುತಲಿ। ಭೂ। ತಾಳಿ ವಿನುತೆ ಬೇಡ್ವೆಂ। ಶಿವ। ಕೇಳಿವಿಲಾಸಿನಿ ಶ್ರೀ ಕರೆ ನತಸುರ। ಪಾಳೀ ಪಾಲಿತೆ ಮನವು ತುಂಬೆ ಮಹಾ। ಕಾಳೀನಿನ್ನ ಪಾಡ್ವೆಂ। ಕೃಪೆ। ತಾಳಿ ವರವ ನೀಡೆಂದು ಅಭಯವೀಯೆಂದು ನಿನ್ನಕಾಡ್ವೆಂ। ಓಂಕಾರಿ ಶಂಕರಿಯೆ, ರುದ್ರಿ, ಭೈರವಿಯೆ ದೇಹಿದೇಹಿ ಕರುಣಾಕರೆ ಶ್ರೀ ಮಹಾ || ಕಾಳೀ || ೧ || ಪೂತೇ। ಜಗದೇಕಮಾತೆ ಹಿಮಶೈಲಜಾತೆ ಭೂತೇಶಪ್ರೀತೆ ಖ್ಯಾತೇ। ನಾ। ಸೋತೆನೆನ್ನ ಹೃದಯೇಶಗಾಗಿ ಸಂ। ಪ್ರೀತಿಯಿಂದಧೀ, ಜ್ಞಾನಶಕ್ತಿಗಳ ನೀಡೆ ಮಹಾನ್‌ದಾತೇ। ಅತಿ। ಭೀತಿಭೀತೆಯಾಗಿಹ ಅನಾಥೆಯ ನೋಡು ಪುನೀತೆ ಕೃಪೆಯಕಣ್ಣಿಂದ ದೇಹಿ ಪರಿ|| ಪೂತೇ || ೨ ||

|| ಕಂದ—ಪದ್ಯ ||

ಮಾತೆ ಮಂದಿರದೊಳಿಲ್ಲವು। ರಾತ್ರಿಯು ಸಮಯದಲಿ ಚರಿಸೆ ಹೊರಟರ ಬಹುದೂ|| ಆ ತಾಯಿಯೊಡನೆ ವರವಂ। ನೀ ತಿಳಿದು ಪಡೆಯೆನುತ ಉಸುರಿ ನಡೆಯುಲು ಬಳಿಕಾ || ೧ ||

ಕಾಂಬೋಧಿ— ಅಷ್ಟ

ಬಂದಳು ಕಾಳಿ ಆಲಯಕೇ। ಬಂದು। ನಿಂದಳು ಬಾಗಿಲದೆಡೆಗೇ ॥ ಮಂದಿರ ದೊಳಿರ್ಪರಾರು ಯಾಕಿಲ್ಲಿ ಗೈತಿ।ತ ದೆಯೊ ತೆರಿ ಬೇಗ ಇಕ್ಕಿಹ ಕದವನ್ನು॥೧॥

ಬಿಹಾಗ... ಏಕ

ಕಾಳಸಾನ್ಕಣೆ ಮಾ।ಕಾಳಿ ತೆಗ್ಯಾಕಿಲ್ಲ। ಏಳಿದ್ದಂಗ ಕೇಳಿಪ್ರೆ ತೆಗಿತೀನಿ ಕದವಾ ॥ ಬಾಳ ಅಕ್ಷರ ಇದ್ಯೆ ಪದನಪ ಕಟ್ಟೊಗೆಯೋದ। ನಾಲಗಿ ವ್ಯಾಗೆ ಬರೆ ಕಾಳವ್ವಾ ॥೯॥

॥ಕಾಂಬೋಧಿ... ಅಷ್ಟ॥

ಕೊಡು ನೀ ಗವಾಕ್ಷದಿ ರಸನೇ। ನಾನು। ಜೊಡುವೆನು ಸಕಲ ಕವಿತ್ವವ ದನೇ। ಕಡು ಭಕ್ತಿಯಿಂದಲಿ ಜಾಚಿವಾಕ್ಷಣದಲ್ಲಿ। ತಡೆಯದೆ ಬರೆದಳಮೃತ ಬೀಜಾಕ್ಷರವನೇ ॥೧॥

॥ಕಾನಡಾ — ಅಷ್ಟ॥

ಇಂದುಶೇಖರನರಸಿಯಾ। ಕೃಪೆ। ಹೊಂದಿದಾ ಮಾತ್ರದಲಿ ಕಾಳನು। ಚಂದ್ರ ದೇವನ ದಿವ್ಯ ಕಾಂತಿಯೊ। ಳಂದು ಶೋಭಿಸೆ ಹಾಡಿದಾ ॥೧॥

॥ಶ್ಲೋಕ॥

ಮಾಣಿಕ್ಯವೀಣಾ ಮುಪಲಾಲಯಂತೀಂ। ಮದಲಸಾಂ ಮಂಜುಳ ವಾಗ್ವಿ ಲಾಸಾಂ। ಮಹೇಂದ್ರ ನೀಲದ್ಯುತಿ ಕೋಮಲಾಂಗೀಂ। ಮಾತಂಗಕನ್ಯಾಂ ಮನಸಾ ಸ್ಮರಾಮಿ ॥ ಚತುರ್ಭುಜೇ ಚಂದ್ರಕಳಾವತಂಸೇ। ಕುಚೋನ್ನತೇ ಕುಂಕುಮರಾಗ ಶೋಣೇ! ಪುಂಡ್ರೇಕ್ಷು ಪಾಶಾಂಕುಶ ಪುಷ್ಪ ಬಾಣೇ। ಹಸ್ತೇ ನಮಸ್ತೇ ಜಗದೇಕಮಾತಃ ॥ ಮಾತಾ ಮರಕತಶ್ಯಾಮಾ। ಮಾತಂಗೀ ಮಧುಶಾಲಿನೀ। ಕುರ್ಯಾತ್ಕಟಾಕ್ಷಂ ವಂದೇತಾಂ ಕದಂಬವನವಾಸಿನೀಂ ॥೧॥

॥ಕೇತಾರ ಗೌಳ ಅಷ್ಟ॥

ಭಳಿರೆ ಮೆಚ್ಚಿದೆ ಭಕ್ತಕುಲ ಶಿರೋಮಣಿ ನಿನ್ನ ವಿಲಸಿತ ಕಾವ್ಯದೀಧಿತಿಗೇ ॥ ಅಲಸದೆ ನವರಸಕವಿತಾ ವೈದ್ಯುತಿಯೊಳು। ಪೊಳೆವ ಕೃತಿಗಳ ಜಗಕೇ ॥೧॥ ಕವಿ ಕುಲ ಜಲಧಿಚಂದಿರ ಯೆನ್ನ ಕೃಪೆಯಲಿ। ಸವಿಮಲಮನದಿಸೀಡೀ॥ ಅವಿರತ ಕೀರ್ತಿಯ ಪೊಂದು ಜಗದಿ ಮಹಾ। ಕವಿಯೆಂದು, ಭಕ್ತನೀನೂ ॥೨॥ ಗುರುವಿರೋಧದ ವೆಸೆಯಿಂದಲೀ ಜನ್ಮದಿ। ಕುರುಬರೊಳ್ ಜನಿಸಿ ಪಾಪ!॥

ಇರುತಿರ್ದೆಯಿಂದು ನಿನ್ನಯ ಕಾಂತೆಯು ವಿದ್ಯಾಧರೆ ಹರಿಸಿದಳು ಶಾಪ ॥೩॥ ಕಾಳಿದಾಸನೆ ನಿನ್ನ ಮನಸಿನ ಬಯಕೆಯ । ಕೇಳಿಕೊಂಬುದು ಎನ್ನಲೀ ॥ ಲೀಲೆಯೊಳ್ ಭಕ್ತಕುಲಾವತಂಸನೆ ನಾನು। ವಾಲಿಪೆನಿಂದಿನಲೀ ॥ ೪ ॥ ಬೇಡುವದೇನಿದೆ ನೀಡಿದೆ ನೀ ಕೃಪೆ। ಮಾಡುತ ಲೋಕಮಾತೇ ॥ ನೋಡಲ ಪೇಕ್ಷಿಪೆ ನೆನೆದಾಗ ನೀನಲಿ। ದಾಡಿ ದರ್ಶನವೀವುದೂ ॥೫। ಅಸ್ತ್ವೆಂದು ದೇವಿ ಅಂತರ್ಧಾನವಾಗಲು। ಚಿತ್ತದಿ ತೋಷತಾಳೀ ॥ ವೃತ್ತಾಂತವರುಹೆ ಧಾವಿಸಿದ ಮಹಾಕವಿ । ಮತ್ತಕಾಶಿನಿಯೆಡೆಗೇ ॥೬॥

|| ಮಧ್ಯಮಾವತಿ—ಏಕ ||

ಧನ್ಯನಾದೆನು ವಿದ್ಯಾಧರೆಯೇ ನಾನಿಂದೂ । ಎನ್ನ ಗೈದಳು ವಿದ್ಯಾವಿದನ ತಾನಿಂದೂ ॥ ಮುನ್ನಿನಜಾಳಿರಕ್ಷಕನು ನಾನಲ್ಲ । ಕನ್ನೆ ಸಂಸ್ಕೃತನೆಂದು ತಿಳಿಯುವದಿಲ್ಲ ॥೧॥ ಹೃದಯೇಶ ತನ್ನ ಕೃಪಾವಲೋಕನದಿ। ಸದಯೇ ಕರುಣಿಸಿದಳು ಭಕ್ತರ ಮನದೀ॥ ಮುದವನಾಂತೆನು ದುಷ್ಟ ಮಂತ್ರಿ ಗೈದುದಕೇ । ಹದವಾಗಿ ತೀರಿತು ಎನ್ನಯ ಬಯಕೇ ॥ ೨ ॥ ಆಣತಿಯೀಯೆ ವಿದ್ಯಾಧರೆ ಬರುವೆ । ಜಾಣೆ ತಿಳಿಯೆಯಾ? ಅಡ್ಡಿ ನಿನಗಿದು ತರವೇ ?॥ ಮಾಣದೆ ಪೂತ ವಿದ್ಯೆಗಳನ್ನು ಕಲಿಸುತ । ಸಾನುರಾಗದಿ ದಿವ್ಯ ಜನುಮವಿತ್ತ ಮಹಾತ್ಮೆ॥೩॥

||ಮಧ್ಯಮಾವತಿ ಅಷ್ಟ||

ಅರಸ ಪೋಗುವದೆಲ್ಲಿಗೆ। ಕಲಾವಿದರರಸೆನ್ನ ಮರೆತು ಹೀಗೆ॥ ತೊರೆದು ಪೋದರೆ ನಾನು। ಧರೆಯೊಳು ಬಾಳೆನು। ಪರಿಪಾಲಿಸಯ್ಯ ನಲ್ಲಾ ॥ ಯೋಗ್ಯವಿದಲ್ಲಾ॥೧ ಸುಗುಣೆ ಬಾ,ಬಾರೆ ಇತ್ತ । ಜಗದಂಬೆಯಾಜ್ಞೆ । ಜಗವೆಲ್ಲವನು ಸುತ್ತುತ್ತ ॥ ಬಗೆಬಗೆ ನವನವೋನ್ಮೇಷಿತಪ್ರತಿಭೆಯ । ಗಗನ ಮಂಡಲಪರ್ಯಂತ ॥ ಪಸರಿಸಲೆಂತ ॥೨॥

||ಮೋಹನ ಝಂಪೆ ||

ಪರಿತಪಿಸಿ ಪಲಗಾಲ। ನರಪತಿಯ ಕರವಿಡಿದು। ಭರಿತ ಸುಖಪಡೆವೆನೆಂಬೆಲ್ಲಾ॥ ಹರಯದಾ ಹಿರಿಬಯಕೆ। ಕರದನ್ನ ಬಾಯ್ಗೆ ಬಂ । ದುರುಳಿ ಸಂತಪಿಸುವಾ। ಪರಿಯಾಯ್ತು ನಲ್ಲಾ ॥೧॥ ಕಾಂತೆ ಬಿಡು ದುಃಖವನು । ಸಂತಸದಿ ಕಳುಹಿಪುದು । ಕಂತುಹರನರಸಿ ಕೃಪೆಯಿಂದಾ॥ ಪಿಂತಿರುಗಿ ಸುಖದಿ ಬರ। ಲಿಂತೆಂಬ ಪ್ರಾರ್ಥನೆಯ । ಅಂತರಂಗದಿ ಗೈವು। ತಿಂತಿರ್ಪುದಂದಾ ॥ ೨ ॥ ಪತಿ ವಿಯೋಗ

ವ್ಯಥೆಯು। ಅತಿಶಯುದ ಭಾರವನು। ಸತಿ ಹೊತ್ತ ಬಾಳುವಳೆ ಪೇಳಿ ॥ ಶ್ರುತಿ, ಶಾಸ್ತ್ರ ವೇದಾಂತ। ದತಿ ಪ್ರಾಜ್ಞರಾಗಿ, ಅನುಚಿತ, ಪಾಪಕಾರ್ಯವಿದು ತಾಳಿ ॥೩॥ ಕುರುಬನಾ ಕೈ ಪಿಡಿದ । ವರವಿದುಷಿ ಕೇಳಮ್ಮ। ತರ ಹರಿಸ ಬೇಡನ್ಯಾಯುವಿದೂ ॥ ಬರಿ ಮಂಕು ಕುರುಬನಿಗೆ। ವರ-ದಿವ್ಯ ಜನ್ಮವನು । ಕರುಣಿಸಿದ ಮಾತಾಯೆ ನೀನೂ ॥ ೪ ॥ ಹರಸಿ ಕಳುಹಮ್ಮ ತವ । ಚರಣ ಕಮಲದೊಳ್ ಬಿದ್ದು । ಎರಗಿ ಪ್ರಾರ್ಥಿಸುವ ಕುವರನನೂ ॥ ಹರನರಸಿ ಯಂತೆ ಅವ। ತರಿಸೆನ್ನ ಮುಂದೆ ಗೋಚರಿಪ ಗೌರಾಂಬೆ ಭಕ್ತನನೂ॥ ೫ ॥

ಸೌರಾಷ್ಟ್ರ...ತ್ರಿ:

ಪಾತಕವು ತನಗಿಲ್ಲವೆನುತಲಿ। ಆ ತರಳೆಯನು ತ್ಯಜಿಸಿ ಪೋಗಲು । ಆತು ಕೊಂಡಿತೆ ಮತ್ತೆ ದುರ್ವಿಧಿ: ಮಾತೆ ಸಲಹೆನುತತ್ತಳೂ ॥೧॥ ಪೊಡವಿಯೊಳು ಕಡುಪಾಪಿ ಅಡಿಯಿಡೆ। ಕಡಲೊಳಗೆ ತಾ ನೆನೆಯಲಾರದು। ಬಿಡುವೆ ಪ್ರಾಣ ವನೆನುತಲೆತ್ತಲು। ಖಡುಗವನ್ನೂ- ॥೨॥

"ಆಕಾಶವಾಣಿ" ಸಾ. ತಿಪ್ಪುಡೆ

ದುಡುಕದಿರು ವಿದ್ಯಾಧರೆಯೆ ನಿ। ನ್ನೊಡೆಯು ಲಭಿಸುವ ! ಧಾರ ಪುರಿಯಲಿ । ತಡೆಯದೇ ವೇಷಾಂತರದಿ ನೀ।ನಡೆವುದಲ್ಲಿ ॥ ೧॥

೧೧೯ ಪದ್ಯಗಳಿಗೆ ಪರಿಸಮಾಪ್ತಿ.

# ರಾಜಸನ್ಮಾನ—ಕನಕಾಭಿಷೇಕ.

ಧಾರಾನಗರದ ಸಭೆಯಲ್ಲಿ ಬೋಜ-ರಾಜ, ಅನೇಕ ಪಂಡಿತರೂ ಕವಿಗಳೂ ಕುಳಿತಿದ್ದಾರೆ. ಸಮೀಪವರ್ತಿಯಾಗಿ ಮಂತ್ರಿ-

||ಸೌರಾಷ್ಟ್ರ ತ್ರಿಪುಟೆ||

ಪರಮ ವೈಭವದಿಂದ ಭೋಜನು | ಮೆರೆದಿರಲು ಸಭೆಯೊಳಗೆ ವೇಳಿದ | ಅರುಹು ರಾಜ್ಯದ ಸ್ಥಿತಿಯ ಮಾತ್ಯನೆ| ವಿವರವಾಗೀ ||೧|| ಭೂಮಿಪ ಶಿಖಾಮಣಿಯೆ ಕೇಳು ಸು|ತ್ರಾಮನವಮ ಘನ ವೈಭವಾಕರ|ಪ್ರೇಮ,ಸುಖ, ತೋಷದೊಳಗಿರುತಿಹರ್, ನೇಮದಂತೆ ||೨|| ಧರೆಯೊಳಖಿಲರು ನಿರತ ಧರ್ಮಾ| ಚರಣೆಯಿಂದಾನಂದದಿಂದಲಿ | ಹರಿಯ ಪದ ಕಮಲವನು ಭಕುತಿಯೊಳ್| ಸ್ಮರಿಪರಯ್ಯಾ ||೩.|| ದೇವ ಸಾಮಂತಾದಿ ಪ್ರಜೆಗಳು | ಭಾವಿಸುತ ಭಯ-ಭಕ್ತಿಯೊಳು ತಾವ್ | ಸೇವಿಸುತ ಕಪ್ಪಾದಿ ಕಾಣ್ಕೆಯನೀವರಯ್ಯಾ ||೪||

||ಮುಖಾರಿ ಅಷ್ಟ||

ಲಾಲಿಸು ಭೋಜರಾಜಾ| ನಾ ಪೇಳ್ವುದ | ಆಲಸ್ಯಗೊಳದೆ ತೇಜಾ || ಕಾಳಿದಾಸನೆಂಬನೋರ್ವ | ಶೀಲ ಪಂಡಿತನು ತಾನು | ವೇಳೆ ಗಂಗಾಲಹರಿಯನ್ನು | ಪೇಳ್ವುದೇನು ಮುಂದೆ ನಾನು ||೧|| ಸುರಗಂಗೆ ಸುರಿವಳಂತೆ | ಸ್ನಾನಾದಿ ಕರ್ಮ | ಚರಣೆಯಿಲ್ಲದಿರುವನಂತೇ|| ಪರಮ ಪಾವನ ಗಂಗೆಯಾಅವ | ತರಣೆಯಿಂ ಪರಿಶುದ್ಧನಾಗಲು | ಸರುವರೂ ಮಹನೀಯನಾ ಪದ | ಸರಸಿರುಹದಲಿ ಮಣಿದರಂತೇ ||೨||

||ಕೇದಾರಗೌಳ—ಅಷ್ಟ||

ಕೇಳಿ ಭೋಜನು ತೋಷ|ತಾಳಿ ಕ್ಷಿಪ್ರದೊಳೀಗ | ಕಾಳಿದಾಸನ ಕರೆಸೂ || ಶೀಲ ವಿದ್ವಾಂಸ ಮಂಡಳ ನಭ ಚಂದ್ರನ | ಕಾಲಹರಣ ಮಾಡದೇ || ೧ ||

(ಕಾಳಿದಾಸನು ಬರುತ್ತಾನೆ.) *

ಪರಿಕಿಸಿ ಭೂಮಿಪ ಚರಣಕೆರಗಿ ದಿವ್ಯ| ತರ ಪೀಠವಿತ್ತು ತಾನೂ || ಪರಹೃದಯಾಭಿಜ್ಞ ಮಹನೀಯನೆಂದುಪ| ಚರಿಸುತ್ತಲಿರಲಾಕ್ಷಣಾ || ೨ || ಬಂದ ಗೋವಿಂದ ಪಂಡಿತನ ಕಾಣುತ ಭೋಜ| ಚಂದದಿ ಸ್ವಾಗತಿಸೀ || ಬಂದು

ದೆಲ್ಲಿಂದೆಂದು ಕೇಳಲಾಕ್ಷಣ ತಾನೈ। ತಂದೆ ಕೌಲಾಸದಿಂದಾ ॥ ೩ ॥ ಪರಶಿವ ಕುಶಲಿಯೇ ಪೇಳಿರೆಂದೆನಲಾಗ । ವರಕವಿ ಗೋವಿಂದನು ॥ ಪರಶಿವ ಸತ್ತು ಹೋದನು ಎನೆ ಕಿವಿ ಮುಚ್ಚಿ । ಅರಸಿ ಇದೇನೆಂಬರೀ ? ॥೪॥ ಹರನ ದೇಹ ದೊಳರ್ಧ ಹರಿ, ಅರ್ಧ ಗಿರಿಜೆಯು । ಶರಧಿ ಸೇರಲು ತಾ ಗಂಗೇ ॥ ಉರಗ ಪಾತಾಳವ, ವರಚಂದ್ರ ಗಗನವ। ಪರಮ ಪ್ರಭುತ್ವಜ್ಞಾನ ॥೫॥ ಧರಣಿಪ ನಿನ್ನಲ್ಲಿ ಹೊಂದಿಕೊಳ್ಳಲು ಆತ । ಬರಿ ಶವ ಶಿವನಲ್ಲಿಹ್ಯೆ॥ ಇರದಿನ್ನ ಸೇರಿದೆ ಭಿಕ್ಷಾಟನೆಯು ಗೂಢ । ತರ ರಹಸ್ಯವನರಿವುದೈ ॥ ೬ ॥

॥ಮಧ್ಯಮಾವತಿ ಏಕ॥

ಕೇಳು ಪಂಡಿತನೇ ನಾ ಪೇಳುವ ನುಡಿಯಾ। ಪೇಳುವೆ ನಿನ್ನ ಕೀರ್ತಿಯ ಭಾರದಡೆಯಾ ॥ ವಾಣಿಯ ವರ ನಿನ್ನ ಕೀರುತಿ ತೂಗೀ । ಕಾಣೆ ನೊದಲು ಜೆಳ್ಳಿ ಸಾಸುವನಿಡಲೂ ॥೧॥ ಸಾಲದಿರಲು ಶುಭ್ರ ವೃಷಭನ ಮತ್ತೆ । ಕಾಲಾಂ ತಕನ ಶ್ವೇತಸಂಕಾಶ ಶಿವನಾ॥ ಶಿರದೊಳಿಟ್ಟನು ಸುರಗಂಗೆಯ ತಾನೂ। ಸರಿ ಯಾಗದಿರೆ ಶ್ವೇತ ನಾಗನ ಅವನೂ॥೨ ಇದೆ ತೂಕ ತಪ್ಪೆ' ಬ್ರಹ್ಮನು ಯೋಚಿ ಸುತ್ತೇ । ಉಡು ಪತಿಯನು ನುತ್ತೆ ಸರಿಯಾಗೆ ಮತ್ತೇ ॥ ಹೊಂದಿರೆ ಕೀರ್ತಿ ಗೋವಿಂದ ಪಂಡಿತರೇ। ಎಂದೆನೆ ಭೋಜ ಹರ್ಷದೊಳೆಂದ ಭಲರೇ ॥ ೩ ॥

ಮೋಹನ—ಅಷ್ಟ

ಪರಮಾನಂದವ ಪೊಂದಿದೆ। ಕವಿಕುಲ ರನ್ನ । ಪರಮಾನಂದವ ಪೊಂದಿದೇ॥ ಸಾರದೆಯಪರಾವತಾರವೆ ನೀನೆಂದು । ತೋರಿಯುದೆನಗಿಂದು । ಸಾರ ವಿದ್ಯಾ ಸಿಂಧು ॥೧॥ ಬಲೆಗಾರರಾಕ್ಷಣದೀ। ತಂದಿರುವಂಥ । ಶಿಲೆಯ ಶಾಸನ ನೋದದೀ॥ ಅಯಂಖಲು ವಿಷಮಃ ಪುರಾಕೃತಾನಾಂ ಭವತಿಹಿ । ಜಂತುಷು ಕರ್ಮಣಾಂ ವಿಪಾಕಃ ಎಂದು ॥೨॥ ಕಾಣದಿರುವ ಭಾಗವಾ। ಕಲ್ಪಿಸುತಲಿ। ಬಾಣ ಕವಿಯು ಪೇಳಿದಾ॥ "ಕ್ವನು ಕುಳಮುಕಳಂಕಮಾಯತಾಕ್ಷ್ಯಾಃಕ್ವಚ। ರಜನೀಚರ ಸಂಗಮಾಪವಾದಃ" ಎಂದೂ ॥೩॥ ಭವಭೂತಿ ಪೇಳ್ದನಾಗಾ । ಅದೃಶ್ಯದ। ವಿವರವನುಸುರ್ವನೀಗಾ "ಕ್ವ ಜನಕ ತನಯಾ ಕ್ವ ರಾಮ ಜಾಯಾಕ್ವಚ। ದಶಕಂಧರ ಮಂದಿರೇ ನಿವಾಸಃ" ಎಂದು ॥ ೪ ॥ ಕಾಳಿ ದಾಸನು ಕಾಣದಾ । ಭಾಗಕ್ಕೆ ತಾ। ಲೀಲೆಯೊಳ್ ಹೊಂದಿಸಿದಾ ॥ ಶಿವ ಶಿರಸಿ ಶಿರಾಂಸಿಯಾನಿ ರೇಜುಃ ಶಿವ ಶಿವ। ತಾನಿಲುಠಂತಿಗೃಧ್ರಪಾದೈಃ" ಇಂ ತೆಂದಾ ॥೫॥ ಶೋಧವಮಾಡಲೆಂದೂ ।ಶಾಸನವನ್ನು। ನೋದದಿ ತೋಳೆಯ

ಲಂಪೂ । ಓದೆನ್ನೆ ಚಾರ್ಥದರ್ಶನದಿಂದ ಸರ್ವರು । ಸಾದರ ವಂದನೆಗೈದರು ತ್ರೋಷದೀ ॥೬॥

ಸುರುಟಿ — ಏಕ

ಆರನೆ ಕಾಳಿದಾಸ । ಹೃದಯನ್ಗ । ಸರಸತಿಯಾವಾಸ ಹರುಷವಾದುದೈ ಕ್ಷಿಪ್ರದಿ ನಿನಗೆ ನ್ನಾ । ವಿರಚಿಪೆನ್ನೆ ಕನಕಾಭಿಷೇಕವನು ೧ ॥ ಜಾಲಗಾರ ರಿಂಗೇ । ಹೇಪುವ । ಚೀಲ ಕೊಡಿಸೆ ಹಾಂಗೇ ॥ ಶೀಲ ಭೋಜನೆಡೆಗೈತಂದಿಹ ಪರಿ । ಯಾಲಿಸಿ ದ್ವಿಜರನು ಕರೆತರುತಿರುತಿರೆ ॥೨॥ ಎಣಿಸುತ ಲವರಂದೂ । ಪೇಳಿದರ್ । ಧನವ ಪಡೆಯಲೆಂದೂ ॥ "ಅಣೋರಣೀಯಾನ್ ಮಹತೋ ಮಹೀಯಾನ್ । ಯಜ್ಞೋಪವೀತಂ ಪರಮಂ ಪವಿತ್ರಂ॥೩॥ ನಗುತ ಭೋಜ ನಿದ್ದ । ಪ್ರೀತಿಯ ಬಗೆಗೆ ದಾಸನಿದ್ದ ॥ನಗೆಗಡಲೊಳು ಓಲಾಡುವ ತೆರದೊಳು। ನಿಗೆ ಬಡ ತುದಿಗಳ । ಕೂಡಿಸಿ ಪೇಳ್ದ ॥೪॥

॥ ಶ್ಲೋಕ

ಅಣೋರಣೀಯಾನ್ ಮಹತೋಮಹೀಯಾನ್। ಮಧ್ಯಂ ನಿತಂಬಶ್ಚ ಯದಂ ಗನಾಯಾಃ ॥ ತದಂಗ ಹಾರಿದ್ರ ನಿಮಜ್ಜನೇನ ಯಜ್ಞೋಪವೀತಂ ಪರಮಂ ಪವಿತ್ರಂ ॥೧॥

॥ಕೇತಾರಗೌಳ — ಝಂಪೆ॥

ಎನೆ ತೋಷತಾಳ್ದ ಭೋಜಾ । ಬಣ್ಣಿಸಿದ । ವಿನುತ ಕಬ್ಬಿಗರ ತೇಜಾ ॥ ಘನತರದ ವಿದ್ವಾಂಸನೂ । ದಶಲಕ್ಷ । ಸ್ವರ್ಣ ಗೌರವವೀವೆನೂ॥ ೧ ॥ ಇತ್ತ ನೆಂಬನ್ನೆ ಗತ್ತ । ಹರಿಶರ್ಮ । ಸುತ್ತೊಬ್ಬ ವಿಪ್ರ ಮತ್ತಾ ॥ ರಿಕ್ತನಾಗದೆಯೆ ತಾನೂ । ತಂದಿಹೆನು । ಮಾತ್ರ ಕಬ್ಬಿನ ತುಂಡನೂ । ೨ ॥ಎನುತ ಬಿಚ್ಚಲು ಗಂಟನೂ । ಕಟ್ಟಿಗೆಯ । ತುಣುಕುಗಳ ತಾ ಕಂಡನೂ ॥ ಮನದಿ ವಿಸ್ಮಯ ಗೊಂಡನೂ । ದುರ್ದೈವ । ಜನಪನಾಂ ಪೇಳಲಾನೂ ॥ ೩ ॥ ತಾಳಿರಲು ಕೋಪವನ್ನೂ । ಪೋದದಲಿ । ಕಾಳಿದಾಸನು ಪೇಳ್ದನೂ ॥ ತಾಳು ತಾಳಯ್ಯ ಭೋಜಾ । ನಿಜ ಪೇಳ್ವೆ । ಶೀಲ ರವಿ ಕೋಟಿತೇಜಾ ॥೪॥

ಭೈರವಿ, . ಅಷ,

ಕೈಲಾಸವಾಸಿ ಸುಟ್ಟಾ।ಮನುಮಥನನ್ನು। ತ್ರೈಲೋಕ್ಯವೀರ ಸುಟ್ಟಾ॥ ಕಾಲಾಗ್ನಿ ಯಂತೆ, ಖಾಂಡವ ಕಾನನವನು ಪಾರ್ತ್ಥಾ ಲಂಕೆಯನು ಸುಟ್ಟಾ ಪವನ ಸಂ

ಜಾತಾ ||೧|| ಆವರೂ ಲೋಕಕ್ಕೆಲ್ಲಾ ದುಃಖಪ್ರದ|ವಾದ ದಾರಿದ್ರ್ಯ ಸುಡಲಿಲ್ಲಾ || ಮೇದಿನೀಪತಿ ನೀನೇ ಶಕ್ರನೆಂದೆನಿಸ್ಸುತ್ತ | ಈ ದಿನ ವಿಪ್ರ ಕಟ್ಟಿಗೆ ತುಂಡ ತಂದಿಹ || ೨ || ಆ ಮಾತ ಕೇಳುತಲೀ| ಹರ್ಷದಿ ಭೋಜ| ಗ್ರಾಮ ಪೊಂದೀಯುತಲೀ || ತಾ ಮುದವಾಂತಿರೆ ಸಂಜೆಯಾಯಿತೆಂದು | ಆ ಮಂತ್ರಿ ಯೆಚ್ಚರಿಸೆ ||೩||

(ಕಾಳಿದಾಸನು ಸಂಧ್ಯಾಕಾಲವನ್ನು ವರ್ಣಿಸುತ್ತಾನೆ.)

||ಶ್ಲೋಕ||

ವ್ಯಸನಿನ ಇವ ವಿದ್ಯಾ ಕ್ಷೀಯತೇ ಪಂಕಜಶ್ರೀಃ| ಗುಣಿನ ಇವ ವಿದೇಶೇ ದೈನ್ಯ ಮಾಯಾಂತಿ ಭೃಂಗಾಃ | ಕುನೃಪತಿರಿವಲೋಕಂ | ಪೀಡಯತ್ಯಂಧಕಾರೋ | ಧನಮಿವ ಕೃಪಣಸ್ಯ ವ್ಯರ್ಥತಾಮೇತಿ ಚಕ್ಷುಃ ||೧||

ಕಂದಪದ್ಯ (ಭೋಜ)

ಎನ್ನ ಸುಯೋಗದಿ ಸೇರಿತು| ಮುನ್ನವೆ ಮಾಕಂದ ವನ್ನು ಕೋಗಿಲೆ ಯೀಗ||
ಧನ್ಯನು ತಾನೆಂದೆನುತಿರೆ| ಕನ್ನಿಕೆ ವಿದ್ಯಾಧರೆ ಸ್ಥಿತಿಯ ಪೇಳ್ವೆನು ಜವದಿಂ||೧

**೩೭ ಪದ್ಯಗಳಿಗೆ ಮುಗಿದುದು.**

ರಾತ್ರಿಸಮಯ. ಪೂರ್ಣಿಮೆ, ಭೋಜ—ಕಾಳಿದಾಸರು ವಿಹಾರಕ್ಕೆ ಹೊರಟಿದ್ದಾರೆ. ಆ ಸಮಯ..........

||ಸೌರಾಷ್ಟ್ರ ತ್ರಿಪುಡೆ||

ಬರುತಿರಲು ವಿದ್ಯಾಧರೆಯು ತಾ| ಪುರುಷವೇಷವ ತಳೆದು ಕಾಂತನ| ಅರಸುತಲಿ ವ್ಯಥೆವೆತ್ತು ಧಾರಾ| ಪುರದಿ ಸಂಚರಿಸುತ್ತಿರೇ ||೧||

[ ಆಗ ಆಕೆಯನು ಕಂಡು ಭೋಜ—ಕಾಳಿದಾಸರಲ್ಲಿ ಪುರುಷನೋ, ಸ್ತ್ರೀಯೋ ಎಂಬ ವಿಷಯಕ್ಕೆ ವಾದವೇಳುತ್ತದೆ. ]

||ಸೌರಾಷ್ಟ್ರ...ತ್ರಿಪುಡೆ||

ನೋಡಿದಳು ತಾ ರತ್ನಮಂಜರಿ| ರೂಢಿಯೊಳಗಚ್ಚರಿಯದೇನಿದು| ಕಾಡುವೊಡೆ ತಾ ಕಾಮ ಬಂದನೆ| ಗಾಢನೆನ್ನ || ೧ || ಆರರೆ ಸುರಪತಿಸೂನುವೋ ತಾ| ಪರಿಕಿಸಲು ನಳನೋ, ವಸಂತನೋ | ಮೆರೆವ ಸುಂದರ ಪುರುಷ ನೀತನ|

ಕರೆಸಿ ನೋಡೆಸ್ತ್ರೀ ||೩|| ಎನುತ ಕಾಕೋದರನ ಕಳಿಸುತ । ಮನಸಿಜನ ಸಮ
ರೂಪನನು ತಾ|ನನುನಯದಿ ಕರೆಸುತ್ತ ಭವನಕೆ|ವಿನಯದಿಂ ಸ್ವಾಗತಿಸುತ್ತಾ||೨
ತರುಣನಪ್ಸರಳ್ ಬರುವ ವೇಷದ । ತರುಣಿ ತೋರಿಸಿ ಕೊಡುವೆ ಬಾ ಮಂ।
ಜರಿಯು ಮಂದಿರಕೆನುತ ಕೃತಕೆ ಭೋಜನಹಿತಾ || ೪ ||

||ರಾಗ - ಕಮಾಚ-ರೂಪತಾಳ||

ಮೋದ ಮಾಂತೆ ಭುವನ ಮೋಹನಾ । ನಿನ್ನಾಗಮನದಿ । ಮೋದ ಮಾಂತೆ
ಭುವನ ಮೋಹನಾ |ಪಲ್ಲ|
ಆವ ದೇ. ವಸರದಾಪ್ರಮ ?। ಬಂದಿರುವ ಕಾರ್ಯವ। ಸಾವಧಾನದಿಂದ
ಪೇಳ್ವುದೂ । ಭಾವಿಸುತ್ತಿ ಪೇಳ್ವುದೊಂದೇ । ಭಾವದಿಂದ ಜೇಡಿ ನಿಂದೆ।
ಕೋಪಿಸ ಬೇನ್ಮೊಡಗೂಡುತ। ಕಾವ್ಪುದು ಕಾಮನ ಕಾಟದಿ ||೧|| ಮನ
ಮೋಹಕ್ಕಿತ್ರ್ವಾಗಲಾಧರೆ। ನಾರಾಂಗನಾ । ಮಣಿಯು ಮಂದಿರವೆಂದು ಬಿಂಬಾ
ಧರೆ ಮನಸ್ಮಾಂತಿಕೆ । ಏಸಿವೆನ್ನುತ ಮಾನಿನೀಮಣಿ ಬೆಡಗಿನಿಂದಲಿ ।
ಆಸಿಸ್ ಕೋಮಲ ಕಾಯದ। ಮಾನಿಸು ಮಮಬಿನ್ನಪವನು || ೨ ||

|| ಕಂದ ಪದ್ಯ

ಕೋಮಲೆ ವಿದ್ಯಾಧರೆ ನಿಜ । ಪ್ರೇಮಿಯು ಪಡೆದಂತು ಪರಮ ಪುಣ್ಯದ
ಬಲದಿಂ । ಕ್ಷೇಮದ ಮಹಿಳಾಲೋಕಕೆ । ಸಮನಿಸಿದಳ್ ಮಂಗಲಾಂಗಿ
ಶುಭ ಮಂಗಳಮಂ ||



# ಭೋಜ-ಕಾಲಿದಾಸ.

ಲೇಖಕರು ಮತ್ತು ಪ್ರಕಾಶಕರು } ಮಂಜನಾಥ ಎಸ್. ಭಾಗ್ವತ

ಮುದ್ರಕರು :— ಗ. ಶ. ಸರ್ಪಕರ್ಣೇಶ್ವರ.

ಮುದ್ರಣ :— ಶ್ರೀಧರ ಪ್ರಿಂಟಿಂಗಪ್ರೆಸ್
ಹೊನ್ನಾವರ [ಉ. ಕ.]